ರಾಮಕೃಷ್ಣ ಮಹಾಸಂಘದ ಏಕೈಕ ಕನ್ನಡ ಮಾಸಪತ್ರಿಕೆ



# ವಿವೇಕಪ್ರಭ

ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ

## ಯುವ ಚೇತನ – ರಾಷ್ಟ್ರ ಚೇತನ

14/-

ಫೆಬ್ರವರಿ–2014



# ಬದರಿಕಾಶ್ರಮ ವಿದ್ಯಾಶಾಲಾ ನೂತನ ಕಟ್ಟಡದ ಉದ್ಘಾಟನೆ

## ದಿನಾಂಕ 09-02-2014, ಭಾನುವಾರ ಮಧ್ಯಾಹ್ನ 3.00 ಗಂಟೆಗೆ










ಬೆಂಗಳೂರಿನಿಂದ ಪಶ್ಚಿಮಕ್ಕೆ 125 ಕಿಮೀ ದೂರದಲ್ಲಿ ಮಾದಿಹಳ್ಳಿಯ 60 ಎಕರೆಯಷ್ಟು ವಿಶಾಲವಾದ ಪ್ರಶಾಂತ ತಪೋಭೂಮಿಯಲ್ಲಿ ಸ್ವಾಮಿ ಓಂಕಾರಾನಂದಜೀ ಅವರು 1983ರಲ್ಲಿ ಸ್ಥಾಪಿಸಿರುವ ಬದರಿಕಾಶ್ರಮವು ನೀಡುತ್ತಿರುವ ಹಲವು ಸಮಾಜಮುಖಿ ಸೇವೆಗಳು ಕೆಳಕಂಡಂತಿವೆ.

- ಶ್ರೀ ರಾಮಕೃಷ್ಣರ, ಶ್ರೀ ಮಾತೆ ಶಾರದಾದೇವಿ ಮತ್ತು ಶ್ರೀ ಲಕ್ಷ್ಮೀನಾರಾಯಣರ ಅಮೃತಶಿಲೆಯ ಮೂರ್ತಿಗಳನ್ನು ಪ್ರತಿಷ್ಠಾಪಿಸಿರುವ ಪ್ರಶಾಂತ ಧ್ಯಾನಮಂದಿರ.
- ಬದರಿಕಾಶ್ರಮ ವಿದ್ಯಾಶಾಲೆ ( ಸು. 5000 ಚದುರ ಅಡಿ ವಿಸ್ತೀರ್ಣದ ಸುಸಜ್ಜಿತ ಕಟ್ಟಡದಲ್ಲಿ 600 ವಿದ್ಯಾರ್ಥಿಗಳು ಎಲ್‌ಕೆಜಿ ಯಿಂದ 5ನೇ ತರಗತಿವರೆಗೆ ವ್ಯಾಸಂಗ ಮಾಡುತ್ತಿದ್ದಾರೆ).
- ಸುಸಜ್ಜಿತವಾದ ಅತಿಥಿಗೃಹಗಳು, ಶಿಕ್ಷಕರಿಗೆ ವಸತಿಗೃಹಗಳು
- ಸ್ವಾಮಿ ವಿವೇಕಾನಂದರ ಬೃಹತ್ ಕಂಚಿನ ಪ್ರತಿಮೆ.
- ಸನ್ಯಾಸಿ ನಿವಾಸಗಳು, ಗೋಶಾಲೆ.
- ಗ್ರಂಥಾಲಯ, ಕಂಪ್ಯೂಟರ್ ತರಬೇತಿ ಕೇಂದ್ರ, ಆಟದ ಮೈದಾನ.
- ಗ್ರಾಮೀಣ ಪ್ರದೇಶದ ಬಡ ಮಕ್ಕಳಿಗೆ ಉಚಿತ ವಿದ್ಯಾರ್ಥಿನಿಲಯ, ಮಧ್ಯಾಹ್ನದ ಭೋಜನ.
- ಶಿಕ್ಷಕರ ಪುನಶ್ಚೇತನ ಶಿಬಿರ, ಯುವಜನ ಜಾಗೃತಿ, ವ್ಯಕ್ತಿತ್ವ ವಿಕಸನ ಕಾರ್ಯಕ್ರಮಗಳು
- ಉಚಿತ ವೈದ್ಯಕೀಯ ಶಿಬಿರಗಳು.
- ನಾಡಿನ ಶ್ರೇಷ್ಠ ವಿದ್ವಾಂಸರು, ಸಂತರಿಂದ ಸತ್ಸಂಗ ಕಾರ್ಯಕ್ರಮಗಳು.

**ಆಶ್ರಮದಲ್ಲಿ ಸ್ವಯಿಚ್ಛೆಯಿಂದ ಸೇವೆ ಸಲ್ಲಿಸುವ ನಿಸ್ವಾರ್ಥ ಸೇವಾಮನೋಭಾವದ ಯುವಕರಿಗೆ ಮತ್ತು ನಿವೃತ್ತ ನೌಕರರಿಗೆ ಮುಕ್ತ ಅವಕಾಶವಿದೆ.**

ಆಶ್ರಮದ ಎಲ್ಲ ಅಭಿವೃದ್ಧಿ ಕಾರ್ಯಗಳು ಜನತೆಗೆ ತಲುಪಿ ಇದನ್ನೊಂದು ಜನಕಲ್ಯಾಣ ಕೇಂದ್ರವನ್ನಾಗಿ ಮಾಡುವ ಸ್ವಾಮೀಜಿ ಅವರ ಸಂಕಲ್ಪವು ಪೂರ್ಣಗೊಳ್ಳಲು ತಮ್ಮಗಳ ತನು ಮನ ಧನ ಸಹಾಯದ ಅವಶ್ಯಕತೆಯಿದೆ. ತಮ್ಮ ಉದಾರವಾದ ನೆರವಿಗೆ ಸರ್ಕಾರದ 80ಜಿ ಮೂಲಕ ತೆರಿಗೆ ವಿನಾಯಿತಿ ದೊರೆಯುತ್ತದೆ.



**ಕಟ್ಟಡದ ಉದ್ಘಾಟನೆ**
**ಶ್ರೀಮತ್ ಸ್ವಾಮಿ ಹರ್ಷಾನಂದಜಿ ಮಹಾರಾಜ್**
ಅಧ್ಯಕ್ಷರು, ಶ್ರೀ ರಾಮಕೃಷ್ಣ ಮಠ, ಬೆಂಗಳೂರು.

**ಆಶೀರ್ವಚನ**
**ಶ್ರೀಮತ್ ಶ್ರೀ ಶ್ರೀ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ**
ಪೀಠಾಧ್ಯಕ್ಷರು, ಶ್ರೀ ಆದಿಚುಂಚನಗಿರಿ ಕ್ಷೇತ್ರ.
**ಶ್ರೀಮತ್ ಸ್ವಾಮಿ ರಾಘವೇಶಾನಂದಜಿ ಮಹಾರಾಜ್**
ಅಧ್ಯಕ್ಷರು, ಶ್ರೀ ರಾಮಕೃಷ್ಣ ಮಠ, ಊಟಿ, ತಮಿಳುನಾಡು,
**ಶ್ರೀಮತ್ ಸ್ವಾಮಿ ಮುಕ್ತಿದಾನಂದಜಿ ಮಹಾರಾಜ್**
ಅಧ್ಯಕ್ಷರು, ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು,

**ಅಧ್ಯಕ್ಷತೆ**
**ಶ್ರೀಮತ್ ಸ್ವಾಮಿ ಓಂಕಾರಾನಂದಜಿ ಮಹಾರಾಜ್**
ಸಂಸ್ಥಾಪಕ ಅಧ್ಯಕ್ಷರು, ಬದರಿಕಾಶ್ರಮ.

**ಸ್ಮರಣ ಸಂಚಿಕೆ ಲೋಕಾರ್ಪಣೆ**
**ಶ್ರೀ ಟಿ. ಬಿ. ಜಯಚಂದ್ರ**
ಸಂಸದೀಯ ವ್ಯವಹಾರ ಹಾಗು ಕಾನೂನು ಸಚಿವರು, ಕರ್ನಾಟಕ ಸರ್ಕಾರ (ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರು)

**ಮುಖ್ಯ ಅತಿಥಿಗಳು**
**ಶ್ರೀ ಕಿಮ್ಮನೆ ರತ್ನಾಕರ್**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ.
**ಶ್ರೀ ಎಂ. ಟಿ. ಕೃಷ್ಣಪ್ಪ**
ಶಾಸಕರು, ತುರುವೇಕೆರೆ.
**ಶ್ರೀ ಎಂ.ಕೆ. ಶಂಕರಲಿಂಗೇಗೌಡ**, ಐ.ಎ.ಎಸ್. (ನಿವೃತ್ತ)

**ಆಹ್ವಾನಿತರು**
**ಶ್ರೀ ಈಶ್ವರಪ್ಪ**
ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ತುಮಕೂರು.
**ಶ್ರೀಮತ್ ಸ್ವಾಮಿ ತ್ಯಾಗೀಶ್ವರಾನಂದಜಿ ಮಹಾರಾಜ್**
ಶ್ರೀ ರಾಮಕೃಷ್ಣ ಆಶ್ರಮ, ಅಲಸೂರು, ಬೆಂಗಳೂರು.
**ಸ್ವಾಮಿ ಮಂಗಳಾನಂದ ಮಾತಾಜಿ**, ಬದರಿಕಾಶ್ರಮ, ಯು.ಎಸ್.ಎ
**ಡಾ|| ವೂಡೇ ಪಿ. ಕೃಷ್ಣ**, ಗೌರವ ಕಾರ್ಯದರ್ಶಿಗಳು, ಶೇಷಾದ್ರಿಪುರಂ ಶಿಕ್ಷಣ ದತ್ತಿ, ಬೆಂಗಳೂರು.
**ಶ್ರೀ ಎಂ. ಎಸ್. ಆತ್ಮಾನಂದ**, ಮಾಜಿ ಸಚಿವರು, ಮಂಡ್ಯ.

**ತಮಗೆಲ್ಲರಿಗೂ ಸುಸ್ವಾಗತ**


# ಬದರಿಕಾಶ್ರಮ

ಮಾದಿಹಳ್ಳಿ, ತುರುವೇಕೆರೆ ತಾ|| ತುಮಕೂರು ಜಿಲ್ಲೆ - 572227
Email : badarik@sify.com Website : www.badarikashrama.org
Ph: 08139 - 287571

ಫೆಬ್ರವರಿ 2014

ಸಂಪುಟ 15 ಸಂಚಿಕೆ 02

# ವಿವೇಕಪ್ರಭ















**E-mail:**
vivekaprabha@hotmail.com
kannada.vivekaprabha@gmail.com
**Website:** vivekaprabha.net
**ಫೋನ್ :** 9481533505

**ಮುಖಪುಟ:**
ಯುವ ಚೇತನ

**ಈ ಪತ್ರಿಕೆಯ ಧ್ಯೇಯ**

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.
– ಸ್ವಾಮಿ ವಿವೇಕಾನಂದ

**ಚಂದಾ ವಿವರ : ಬಿಡಿ ಪ್ರತಿ:** ₹ 14; **ವಾರ್ಷಿಕ:** ₹ 140; **ಮೂರು ವರ್ಷ:** ₹ 375; **ಆಜೀವ** (25 ವರ್ಷ): ₹ 3,000; **ಪೋಷಕ ಸಹಾಯಧನ:** ₹ 5,000 ಅಥವಾ ಹೆಚ್ಚು. **ವಿದೇಶಗಳಿಗೆ:** (ಏರ್‌ಮೇಲ್): **ವಾರ್ಷಿಕ:** $20; **ಮೂರು ವರ್ಷ:** $60; **ಆಜೀವ** (25 ವರ್ಷ): $300; **ಪೋಷಕ ಸಹಾಯಧನ:** $600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/D ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

# ವಿಶೇಷ ಪ್ರವಾಸಗಳು -2014






## 13 ದಿನಗಳ ಕೈಲಾಸ ಮಾನಸ ಸರೋವರ ಯಾತ್ರೆ

ಬೆಂಗಳೂರಿನಿಂದ ಬೆಂಗಳೂರಿಗೆ ವಿಮಾನದಲ್ಲಿ

30,000 ರೂ. ಧನ ಸಹಾಯ ಕರ್ನಾಟಕ ಸರ್ಕಾರದ ವತಿಯಿಂದ

ಹೊರಡುವ ತಿಂಗಳು : ಮೇ, ಜೂನ್, ಜುಲೈ, ಆಗಸ್ಟ್

**ಸಂಪರ್ಕಿಸಿ**
9900080799
9900080792

**ಸಂಪರ್ಕಿಸಿ**
9900080794
9900080797

## 15 ದಿನಗಳ ಗ್ರ್ಯಾಂಡ್ ಯುರೋಪ್ ಪ್ರವಾಸ

ಯು.ಕೆ. ಫ್ರಾನ್ಸ್, ಬೆಲ್ಜಿಯಂ, ನೆದರ್‌ಲ್ಯಾಂಡ್, ಜರ್ಮನಿ, ಸ್ವಿಟ್ಜರ್‌ಲ್ಯಾಂಡ್, ಆಸ್ಟ್ರೀಯಾ, ಲಿಚೆನ್‌ಟೆನ್‌ಸ್ಟೈನ್, ಇಟಲಿ,

ಹೊರಡುವ ತಿಂಗಳು : ಏಪ್ರಿಲ್, ಮೇ, ಜೂನ್





## 7 ದಿನಗಳ ಸಿಂಗಾಪುರ - ಮಲೇಶಿಯ ಪ್ರವಾಸ

ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್, ಬರ್ಡ್‌ಪಾರ್ಕ್, ಸಾಂಗ್ ಆಫ್ ಸೀ

ಮಲೇಶಿಯ : ಕೌಲಲೊಂಪುರ್ ಸಿಟಿ ಟೂರ್, ಬಾಟು ಗುಹೆ, ಪುತ್ರಜಯ, ಜಂಟಿಂಗ್ ಹೈಲ್ಯಾಂಡ್, ಜುಹೊರ್‌ಬರ್ ಸಿಟಿ ಟೂರ್

ಹೊರಡುವ ತಿಂಗಳು : ಮಾರ್ಚ್, ಏಪ್ರಿಲ್, ಮೇ

**ಸಂಪರ್ಕಿಸಿ**
9900080795
9900080799

**ಸಂಪರ್ಕಿಸಿ**
9900080799
9900080793

## 8 ದಿನಗಳ ಕಾಂಬೋಡಿಯಾ - ಥೈಲ್ಯಾಂಡ್ ಪ್ರವಾಸ

ಕಾಂಬೋಡಿಯಾ - ಸಿಯಾಮ್‌ರಿಪ್, ಅಂಕೂರ್‌ವಾಟ್, ಟೋನ್ ಸ್ಯಾಪ್ ಸರೋವರ, ತಾಪ್ರಾಮ್, ಬಯಾನ್, ಬಪೂನ್ ದೇವಾಲಯಗಳು, ಥೈಲ್ಯಾಂಡ್ - ಪಟ್ಟಾಯ, ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ವಾಕರ್ ಸ್ಟ್ರೀಟ್

ಹೊರಡುವ ತಿಂಗಳು : ಫೆಬ್ರವರಿ, ಮಾರ್ಚ್, ಏಪ್ರಿಲ್





## 6 ದಿನಗಳ ಶ್ರೀಲಂಕಾ ಪ್ರವಾಸ

ರಾಮಾಯಣ ಕಾಲದ ಸ್ಥಳ ವೀಕ್ಷಣೆ

ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ, ಹನುಮಾನ್ ದೇವಸ್ಥಾನ ಹಾಗೂ ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು

ಹೊರಡುವ ತಿಂಗಳು : ಫೆಬ್ರವರಿ, ಮಾರ್ಚ್, ಏಪ್ರಿಲ್

**ಸಂಪರ್ಕಿಸಿ**
9900080799
9900080795

**ಸಂಪರ್ಕಿಸಿ**
9900080792
9900080793

## 3 ದಿನಗಳ ಅಹೋಬಿಲಂ ನವನಾರಸಿಂಹ ಪ್ರವಾಸ

ಪ್ರವಾಸ ಸ್ಥಳಗಳು: ಜ್ವಾಲಾನರಸಿಂಹ, ಪಾವನನರಸಿಂಹ, ವರಹಾನರಸಿಂಹ, ಕಾರಂಜಿನರಸಿಂಹ, ಮಾಲೋಲನರಸಿಂಹ, ಯೋಗನರಸಿಂಹ, ಭಾರ್ಗವನರಸಿಂಹ, ಛತ್ರವಟನರಸಿಂಹ

ಹೊರಡುವ ತಿಂಗಳು : ಜನವರಿ, ಫೆಬ್ರವರಿ, ಮಾರ್ಚ್



**Orchid Travel & Tours**

# 98, 1st Floor, D.V.G. Road, Basavanagudi, Bangalore - 560 004.

www.orchidtours.net

**Tel : 080-26670646**
**26621983, 26670647**
**26617178**



# ಶಂಕರಾಚಾರ್ಯರ ' ಹರಿಚರಣಾಷ್ಟಕಮ್ '



ಧ್ಯೇಯಂ ವದಂತಿ ಶಿವಮೇವ ಹಿ ಕೇಚಿದನ್ಯೇ
ಶಕ್ತಿಂ ಗಣೇಶಮಪರೇ ತು ದಿವಾಕರಂ ವೈ ।
ರೂಪೈಸ್ತು ತೈರಪಿ ವಿಭಾಸಿ ಯತಸ್ತ್ವಮೇವ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥

ಕೆಲವರು ಧ್ಯಾನಿಸಲು ಶಿವನೇ ಯೋಗ್ಯನು ಎನ್ನುವರು. ಕೆಲವರು ಶಕ್ತಿ ಎನ್ನುವರು. ಕೆಲವರು ಗಣೇಶ ಎನ್ನುವರು. ಇನ್ನು ಕೆಲವರು ಸೂರ್ಯ ಎನ್ನುವರು. ಆದರೆ ಹೇ ಶಂಖಪಾಣಿ, ನೀನು ಆ ಎಲ್ಲ ರೂಪಗಳಲ್ಲಿಯೂ ಪ್ರಕಾಶಿಸುತ್ತಿರುವುದರಿಂದ ನೀನೇ ನನಗೆ ಶರಣು.

ನೀಚೋಽಪಿ ಪಾಪವಲಿತೋಽಪಿ ವಿನಿಂದಿತೋಽಪಿ
ಬ್ರೂಯಾತ್ತವಾಹಮಿತಿ ಯಸ್ತು ಕಿಲೈಕವಾರಮ್ ।
ತಂ ಯಚ್ಛಸೀಶ ನಿಜಲೋಕಮಿತಿ ವ್ರತಂ ತೇ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥

ನೀಚನಾಗಿರಲಿ, ಪಾಪಿಯಾಗಿರಲಿ, ನಿಂದನೀಯನಾಗಿರಲಿ. ಅವನು ಒಂದೇ ಸಲ 'ನಾನು ನಿನ್ನವನು' ಎಂದರೆ ಸಾಕು, ನೀನು ಅವನಿಗೆ ನಿನ್ನ ಲೋಕದಲ್ಲಿ ಆಶ್ರಯವನ್ನು ಕೊಡುವೆ. ಅದು ನಿನ್ನ ವ್ರತವಾಗಿದೆ. ಆದಕಾರಣ ಹೇ ಶಂಖಪಾಣಿ, ನೀನೇ ನನಗೆ ಶರಣು.

ವೇದೇಷು ಧರ್ಮವಚನೇಷು ತಥಾಽಗಮೇಷು
ರಾಮಾಯಣೇಽಪಿ ಚ ಪುರಾಣಕದಂಬಕೇ ವಾ ।
ಸರ್ವತ್ರ ಸರ್ವವಿಧಿನಾ ಗದಿತಸ್ತ್ವಮೇವ
ತಸ್ಮಾತ್ತ್ವಮೇವ ಶರಣಂ ಮಮ ಶಂಖಪಾಣೇ ॥

ವೇದಗಳಲ್ಲಿ, ಧರ್ಮಶಾಸ್ತ್ರಗಳಲ್ಲಿ, ಆಗಮಗಳಲ್ಲಿ, ಶ್ರೀಮದ್ರಾಮಾಯಣದಲ್ಲಿ ಮತ್ತು ಪುರಾಣಗಳಲ್ಲಿ, ಎಲ್ಲ ಕಡೆಗಳಲ್ಲಿಯೂ, ಎಲ್ಲ ವಿಧಗಳಲ್ಲಿಯೂ ನಿನ್ನನ್ನೇ ಸಾರಿ ಹೇಳಲಾಗಿದೆ; ಆದಕಾರಣ ಹೇ ಶಂಖಪಾಣಿ, ನೀನೇ ನನಗೆ ಶರಣು.

# ಯುವಕರಿಗೆ ಸ್ವಾಮಿ ವಿವೇಕಾನಂದರ ಸಂದೇಶ

೧. ನನ್ನ ನಂಬಿಕೆಯೆಲ್ಲವೂ ಯುವಪೀಳಿಗೆಯ ಮೇಲೆ, ಆಧುನಿಕ ಜನಾಂಗದ ಮೇಲೆ ಇದೆ. ಅವರಿಂದಲೇ ನನ್ನ ಕೆಲಸಗಾರರು ಹೊರಹೊಮ್ಮುತ್ತಾರೆ. ಅವರು ಸಿಂಹಗಳ ಹಾಗೆ, ಇಡೀ ಸಮಸ್ಯೆಯ ಪರಿಹಾರ ಕಂಡುಕೊಳ್ಳಲು ಕಾರ್ಯತತ್ಪರರಾಗುತ್ತಾರೆ. ನಾನು ಒಂದು ಭಾವನೆಯನ್ನು ರೂಪಿಸಿದ್ದೇನೆ ಹಾಗೂ ನನ್ನ ಇಡೀ ಜೀವನವನ್ನು ಅದಕ್ಕಾಗಿ ಸಮರ್ಪಿಸಿದ್ದೇನೆ. (ನನ್ನ ಅನುಯಾಯಿಗಳು) ಒಂದು ಕೇಂದ್ರದಿಂದ ಇನ್ನೊಂದು ಕೇಂದ್ರಕ್ಕೆ – ಕಟ್ಟಕಡೆಯಲ್ಲಿ ನಾವು ಇಡೀ ಭಾರತವನ್ನು ತಲುಪುವ ತನಕ – ಈ ಭಾವನೆಯನ್ನು ಹರಡುತ್ತ ಸಂಚರಿಸುತ್ತಾರೆ.

೨. ನಾನು ಈ ಯುವಜನರನ್ನು ಸಂಘಟಿಸಲೆಂದೇ ಜನ್ಮವೆತ್ತಿದ್ದೇನೆ. ನೋಡುತ್ತಿರಿ, ಈಗ ಇರುವುದಕ್ಕಿಂತಲೂ ನೂರಾರು ಹೆಚ್ಚು ಯುವಕರು ಪ್ರತಿಯೊಂದು ನಗರದಲ್ಲಿಯೂ ನನ್ನನ್ನು ಸೇರಲು ಸಿದ್ಧರಾಗುತ್ತಾರೆ. ಅವರನ್ನೆಲ್ಲ ನಾನು, ತಡೆಯಲಾಗದ ಅಲೆಗಳಂತೆ ಭಾರತದೇಶದಾದ್ಯಂತ ಘೋರ್ಗರೆಯಲು ಕಳಿಸಲು ಇಚ್ಛಿಸುತ್ತೇನೆ. ಅವರೆಲ್ಲರೂ ಅತ್ಯಂತ ದಾರಿದ್ರ್ಯದಲ್ಲಿರುವವರ ಹಾಗೂ ಕೆಳಮಟ್ಟದಲ್ಲಿರುವವರ ಮನೆಗಳ ಬಾಗಿಲಿಗೇ ಸಾಂತ್ವನ, ನೀತಿ, ಧರ್ಮ ಮತ್ತು ಶಿಕ್ಷಣಗಳನ್ನು ತಲುಪಿಸುತ್ತಾರೆ.

೩. ಎಲ್ಲಕ್ಕಿಂತ ಮೊದಲಾಗಿ ನಮ್ಮ ಯುವಜನರು ಶಕ್ತಿಶಾಲಿಗಳಾಗಬೇಕು. ಧರ್ಮವು ಅನಂತರ ಬರುವುದು. ಓ ನನ್ನ ಯುವ ಸ್ನೇಹಿತರೇ, ಮೊದಲು ಬಲಶಾಲಿಗಳಾಗಿ. ನಿಮಗೆ ನಾನು ನೀಡುವ ಸಲಹೆಯೇ ಇದು. ಭಗವದ್ಗೀತೆಯನ್ನು ಓದುವುದಕ್ಕಿಂತ ಫುಟ್‌ಬಾಲ್ ಆಟದಿಂದ ನೀವು ಸ್ವರ್ಗಕ್ಕೆ ಹತ್ತಿರದವರಾಗುತ್ತೀರಿ. ಇದು ಕೆಚ್ಚೆದೆಯ ಮಾತುಗಳು; ಆದರೆ ನಾನು ಅವನ್ನು ಹೇಳಲೇಬೇಕಾಗಿದೆ. ಏಕೆಂದರೆ ನಾನು ನಿಮ್ಮನ್ನು ಪ್ರೀತಿಸುತ್ತೇನೆ. ಸಮಸ್ಯೆ ಎಲ್ಲಿದೆಯೆಂದು ನನಗೆ ಗೊತ್ತು. ನಾನು ಸ್ವಲ್ಪ ಅನುಭವವನ್ನೂ ಪಡೆದುಕೊಂಡಿದ್ದೇನೆ. ನಿಮ್ಮ ತೋಳುಗಳು ಹಾಗೂ ಮಾಂಸಖಂಡಗಳ ಬಲವನ್ನು ಸ್ವಲ್ಪ ಹೆಚ್ಚಿಸಿಕೊಳ್ಳುವುದರಿಂದ, ನೀವು ಭಗವದ್ಗೀತೆಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವಿರಿ.

೪. ಒಬ್ಬ ಇಂಗ್ಲಿಷ್ ಹುಡುಗ ನಿಮಗೆ ಹೇಳುವನು, "ನಾನೊಬ್ಬ ಇಂಗ್ಲಿಷರವನು, ನಾನು ಏನು ಬೇಕಾದರೂ ಮಾಡಬಲ್ಲೆ" ಎಂದು. ಅಮೆರಿಕದ ಹುಡುಗನೊಬ್ಬ ನಿಮಗೆ ಹೀಗೆಯೇ ಹೇಳುತ್ತಾನೆ. ಹಾಗೆಯೇ ಒಬ್ಬ ಯೂರೋಪಿನ ಹುಡುಗ ಕೂಡ. ನಮ್ಮ ಹುಡುಗರು ಹೀಗೆಯೇ ಹೇಳುತ್ತಾರೇನು? ಇಲ್ಲ, ಆ ಹುಡುಗರ ಅಪ್ಪಂದಿರೂ ಹಾಗೆ ಹೇಳಿಕೊಳ್ಳುವುದಿಲ್ಲ. ಏಕೆಂದರೆ ನಾವು ನಮ್ಮ ಮೇಲಿನ ಶ್ರದ್ಧೆಯನ್ನು ಕಳೆದುಕೊಂಡಿರುವೆವು.

೫. ಓ ನನ್ನ ವೀರಬಾಲಕರೇ, ನೀವೆಲ್ಲರೂ ಮಹತ್ಕಾರ್ಯಗಳನ್ನು ಮಾಡಲು ಹುಟ್ಟಿದ್ದೀರಿ ಎಂಬ ಶ್ರದ್ಧೆ ನಿಮ್ಮಲ್ಲಿರಲಿ. ಕುನ್ನಿಗಳ ಬೊಗಳುವಿಕೆಯು ನಿಮ್ಮನ್ನು ಭಯಪಡಿಸದೆಯೇ ಇರಲಿ – ಇಲ್ಲ, ಇಲ್ಲ, ಆಗಸದ ಮಿಂಚುಗುಡುಗುಗಳೂ ಸಹ. ಅದಕ್ಕೆ ಬದಲಾಗಿ ಎದ್ದುನಿಂತು, ಕೆಲಸಮಾಡಿ.

ನೀವು ಬದುಕುವುದು ಒಂದೇ ಸಲ. ಅದನ್ನು ಸರಿಯಾದ ರೀತಿಯಲ್ಲಿ ಬಾಳಿದರೆ ಸಾಕು. ಹೀಗಾಗಿ ಒಮ್ಮೆ ಬದುಕುವುದು ಬೇಕಾದಷ್ಟು.
– ಮೇ ವೆಸ್ಟ್ (Mae West)

ನನ್ನ ಜೀವನದಲ್ಲಿ ನಾನು ಏನನ್ನು ಕಲಿತಿದ್ದೇನೋ, ಅದೆಲ್ಲವನ್ನೂ ಮೂರು ಪದಗಳಲ್ಲಿ ಸಂಗ್ರಹಿಸುತ್ತೇನೆ: 'ಅದು ಸಾಗುತ್ತಲೇ ಇರುತ್ತದೆ.'
– ರಾಬರ್ಟ್ ಫ್ರಾಸ್ಟ್ (Robert Frost)

ನೀವು ನಿಮ್ಮ ಬೇರೆ ಬೇರೆ ಯೋಜನೆಗಳಲ್ಲಿ ಮಗ್ನರಾಗಿರುವಾಗ, ಯಾವುದು ಸರಿದುಕೊಂಡು ಹೋಗುತ್ತಿರುವುದೋ, ಅದನ್ನೇ 'ಜೀವನ' ಎನ್ನುವುದು. – ಅಲೆನ್ ಸೌಂಡರ್ಸ್ (Allen Saunders)

ಜೀವನವೆಂದರೆ ಬೈಸಿಕಲ್ ಸವಾರಿ ಮಾಡುವ ಹಾಗೆ. ನಿಮ್ಮ ಸಂಯಮವನ್ನು ಕಾಪಾಡಿಕೊಳ್ಳಲು ನೀವು ಸಾಗುತ್ತಲೇ ಇರಬೇಕು.
– ಆಲ್ಬರ್ಟ್ ಐನ್‌ಸ್ಟೈನ್ (Albert Einstein)

ಮರಣಭಯವು ಜೀವನಭಯವನ್ನು ಅನುಸರಿಸುತ್ತದೆ. ಸಂಪೂರ್ಣವಾಗಿ ಜೀವನವನ್ನು ನಡೆಸಿದವನು ಯಾವುದೇ ಸಮಯದಲ್ಲಿ ಸಾಯಲು ಸಿದ್ಧನಿರುತ್ತಾನೆ. – ಮಾರ್ಕ್ ಟ್ವೈನ್ (Mark Twain)

ಸಂಗತಿಗಳು ಮಾರ್ಪಡುತ್ತಲೇ ಇರುತ್ತವೆ; ಸ್ನೇಹಿತರು ದೂರವಾಗುತ್ತಲೇ ಇರುತ್ತಾರೆ. ಆದರೆ ಜೀವನವು ಯಾರ ಸಲುವಾಗಿಯೂ ನಿಲ್ಲುವುದಿಲ್ಲ. – ಸ್ಟೀಫನ್ ಚಬೋಸ್ಕಿ (Stephen bosky)

ಶ್ರೀರಾಮಕೃಷ್ಣ ಸೇವಾಶ್ರಮ ಆಸ್ಪತ್ರೆ ( ಶ್ರೀರಾಮಕೃಷ್ಣ ಶಾರದಾಶ್ರಮ ಪೊನ್ನಂಪೇಟೆಯ ಅಂಗಸಂಸ್ಥೆ )
ಪ್ರಕೃತಿ ಚಿಕಿತ್ಸೆ , ಯೋಗ ಹಾಗೂ ಫಿಸಿಯೋಥೆರಪಿ ವಿಭಾಗ, ಪೊನ್ನಂಪೇಟೆ – 571216
E-mail: srkseva@gmail.com Web: www.rkmponnampet.org

# ಪ್ರಕೃತಿ ಚಿಕಿತ್ಸೆ, ಯೋಗ ಹಾಗೂ ಫಿಸಿಯೋಥೆರಪಿ ಶಿಬಿರ

ನಿಸರ್ಗ ಚಿಕಿತ್ಸೆ ಆಧುನಿಕ ಮಾನವನಿಗೆ ಅತ್ಯಂತ ಅವಶ್ಯಕವಿರುವ ಚಿಕಿತ್ಸಾಪದ್ಧತಿ. ಪಂಚಮಹಾಭೂತಗಳಿಂದ ಮಾಡಲ್ಪಟ್ಟಂತಹ ನಮ್ಮ ಶರೀರಕ್ಕೆ ಪಂಚಮಹಾಭೂತಗಳಿಂದಲೇ ಚಿಕಿತ್ಸೆ ನೀಡುವಂತಹ ಅತ್ಯಂತ ಸರಳ, ಔಷಧಿರಹಿತ, ಸುಲಭ ಚಿಕಿತ್ಸಾವಿಜ್ಞಾನವೇ ಪ್ರಕೃತಿ ಚಿಕಿತ್ಸೆ.

ಜಾಗತೀಕರಣದ ಪ್ರಭಾವದಿಂದ ಹಲವಾರು ಜೀವನಶೈಲಿ ಸಂಬಂಧಿ, ಕಂಪ್ಯೂಟರ್ ಸಂಬಂಧಿ ಆರೋಗ್ಯ ಸಮಸ್ಯೆಗಳು ಹುಟ್ಟಿಕೊಂಡಿವೆ. ಹೃದಯರೋಗ, ಮಧುಮೇಹ, ಬೊಜ್ಜು, ಅಧಿಕ ರಕ್ತದೊತ್ತಡ, ಅಸ್ತಮ, ಮನೋದೈಹಿಕ ಖಾಯಿಲೆಗಳು ಇವುಗಳಲ್ಲಿ ಅಗ್ರಸ್ಥಾನದಲ್ಲಿವೆ. ಈ ಖಾಯಿಲೆಗಳಿಗೆ ಮನುಷ್ಯನ ಸ್ವಯಂಕೃತ ಅಪರಾಧಗಳಾದ ಬದಲಾದ ಜೀವನಶೈಲಿ, ಆಹಾರಪದ್ಧತಿ, ಮಾನಸಿಕ ಒತ್ತಡ, ವ್ಯಾಯಾಮರಹಿತ ವೇಗದ ಜೀವನವೇ ಮೂಲಕಾರಣಗಳೆಂದು ಹೇಳಬಹುದು.

ಅನಾರೋಗ್ಯದ ಮೂಲಕಾರಣವನ್ನು ತಿಳಿದು ಅದಕ್ಕೆ ಚಿಕಿತ್ಸೆ ನೀಡುತ್ತಾ, ದೇಹದ ರೋಗನಿರೋಧಕ ಶಕ್ತಿಯನ್ನು ಹೆಚ್ಚಿಸಿ ರೋಗಗಳನ್ನು ಬೇರುಸಹಿತ ನಿರ್ಮೂಲನೆಗೊಳಿಸುವ, ಅಂತೆಯೇ ಸೈಡ್ ಇಫೆಕ್ಟ್ ಇಲ್ಲದ ಪ್ರಕೃತಿ ಚಿಕಿತ್ಸಾ ವಿಧಾನ ಇಂದಿನ ಸಮಾಜದ ಅಗತ್ಯವಾಗಿದೆ.

ರೋಗಿಯನ್ನು ಕೇವಲ ದೇಹವೆಂದು ಪರಿಗಣಿಸದೆ ಸಮಗ್ರವಾಗಿ ಪರಿಗಣಿಸಿ, ಚಿಕಿತ್ಸೆ ನೀಡಿ ನಂತರ ರೋಗ ಮರುಕಳಿಸದಂತೆ ಮಾರ್ಗದರ್ಶನ ನೀಡುವುದೇ ಪ್ರಕೃತಿ ಚಿಕಿತ್ಸೆ ಹಾಗೂ ಯೋಗ ಚಿಕಿತ್ಸೆಗಳ ಗುರಿ.

ಪ್ರಕೃತಿ ಚಿಕಿತ್ಸೆ ಖಾಯಿಲೆಗಳನ್ನು ಗುಣಪಡಿಸಿದರೆ, ಯೋಗವು ಆರೋಗ್ಯವನ್ನು ಕಾಯ್ದುಕೊಂಡು ಹೋಗಲು ಸಹಕರಿಸುತ್ತದೆ.

ದೈನಂದಿನ ಜೀವನದಲ್ಲಿ ಕ್ರಮಬದ್ಧ ಆಹಾರ, ವಿಹಾರ, ವ್ಯಾಯಾಮ ಮತ್ತು ನಿಸರ್ಗ ಚಿಕಿತ್ಸೆ ನಿಯಮಗಳನ್ನು ರೂಡಿಸಿಕೊಂಡು **'ಮರಳಿ ಪ್ರಕೃತಿಗೆ'** ಎಂಬ ಧ್ಯೇಯವಾಕ್ಯ ಪಾಲಿಸಿದಲ್ಲಿ ಸದೃಢ ತೃಪ್ತ ಜೀವನ ನಡೆಸಲು ಸಾಧ್ಯ.

**ಪ್ರಕೃತಿ ಚಿಕಿತ್ಸೆಯಿಂದ ಉಪಚರಿಸಬಹುದಾದ ಕಾಯಿಲೆಗಳು:** ಅರೆತಲೆಶೂಲೆ, ತಲೆನೋವು, ನಿದ್ರಾಹೀನತೆ, ಖಿನ್ನತೆ, ಮಾನಸಿಕ ಒತ್ತಡ, ಅಧಿಕ ರಕ್ತದೊತ್ತಡ, ಮಧುಮೇಹ, ಅಸ್ತಮ, ಬೊಜ್ಜು, ಕತ್ತುನೋವು, ಸೊಂಟನೋವು, ಮಂಡಿನೋವು, ಮಲಬದ್ಧತೆ, ಅಲರ್ಜಿ, ಸೈನಸೈಟಿಸ್, ಪಾರ್ಶ್ವವಾಯು ಇತ್ಯಾದಿ.

ಶ್ರೀರಾಮಕೃಷ್ಣ ಸೇವಾಶ್ರಮ ಆಸ್ಪತ್ರೆ, ಪೊನ್ನಂಪೇಟೆಯಲ್ಲಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ವಿಭಾಗವನ್ನು ಪ್ರಾರಂಭಿಸಲಾಗಿದೆ. ಇಲ್ಲಿ ಯೋಗ ಚಿಕಿತ್ಸೆ, ಜಲ ಚಿಕಿತ್ಸೆ, ಫಿಸಿಯೋಥೆರಪಿ, ಅಕ್ಯುಪಂಕ್ಚರ್, ಮಸಾಜ್ ಚಿಕಿತ್ಸೆ, ಮಣ್ಣಿನ ಚಿಕಿತ್ಸೆಗಳ ಸೇವೆಗಳು ಲಭ್ಯವಿದೆ.

**ಶ್ರೀರಾಮಕೃಷ್ಣ ಸೇವಾಶ್ರಮ ಆಸ್ಪತ್ರೆ, ಪೊನ್ನಂಪೇಟೆಯಲ್ಲಿ ಈ ಕೆಳಕಂಡಂತೆ ಮೂರು ಪ್ರಕೃತಿ ಚಿಕಿತ್ಸೆ, ಯೋಗ ಹಾಗೂ ಫಿಸಿಯೋಥೆರಪಿ ಶಿಬಿರಗಳನ್ನು ಆಯೋಜಿಸಲಾಗಿದೆ:**

1. 20.02.2014 ರಿಂದ 23.02.2014 ರವರೆಗೆ
2. 13.03.2014 ರಿಂದ 16.03.2014 ರವರೆಗೆ
3. 10.04.2014 ರಿಂದ 13.04.2014 ರವರೆಗೆ

**ಶಿಬಿರದಲ್ಲಿ ಪಾಲ್ಗೊಳ್ಳಲು ಬಯಸುವ ಆಸಕ್ತರು ಸಂಪರ್ಕಿಸಬೇಕಾದ ದೂರವಾಣಿ ಸಂಖ್ಯೆ:** 9845395293, 08274–249555, 249040. **ನೋಂದಣಿ ಶುಲ್ಕ :** 500 ರೂಪಾಯಿಗಳು. (ಚಿಕಿತ್ಸಾ ಶುಲ್ಕ ಪ್ರತ್ಯೇಕ)

**ಹಿಂದಿನ ಶಿಬಿರಾರ್ಥಿಯೊಬ್ಬರ ಅನಿಸಿಕೆ**

"ಒಟ್ಟಾಗಿ ನೋಡಿದರೆ, ದೈಹಿಕವಾಗಿ, ಮಾನಸಿಕವಾಗಿ ಅತಿಕಡಿಮೆ ಸಮಯದಲ್ಲಿ ಅದ್ಭುತ ಪರಿಣಾಮ ಬೀರಿದ ಪರಮಹಂಸರ ಈ ಕೃಪೆಗೆ ತಲೆಬಾಗುವೆವು. ದಯವಿಟ್ಟು ಸಮಸ್ಯೆಯಿಂದ ಬಳಲುವವರು ಪರೀಕ್ಷಾತ್ಮಕವಾದ ದೃಷ್ಟಿಯಿಂದಾದರೂ ಇಲ್ಲಿಗೆ ಬಂದು ಭಗವತ್‌ಕೃಪೆ ಹಾಗೂ ಔಷಧೋಪಚಾರದ ಉಪಯೋಗವನ್ನು ಪಡೆದುಕೊಳ್ಳಲಿ ಎಂಬ ಆಶಾಭಾವನೆ ನಮ್ಮದು."

# ಯುವಚೇತನ–ರಾಷ್ಟ್ರಚೇತನ

**ಯುವಚೇತನ** – ಎಂಥ ಸುಂದರವಾದ ಪದ! ಯುವಕ ಎಂದಾಕ್ಷಣವೇ ದೃಢಕಾಯನಾದ, ಸ್ಫುರದ್ರೂಪಿಯಾದ, ಆತ್ಮವಿಶ್ವಾಸವೇ ಮೈವೆತ್ತಂತೆ ಇರುವ ಎಳೆಯ ವಯಸ್ಸಿನ ವ್ಯಕ್ತಿಯ ಚಿತ್ರಣ ನಮ್ಮ ಮುಂದೆ ಬರುವುದು. ಯೌವನವೆಂಬುದು ಕೇವಲ ದೈಹಿಕ ಅವಸ್ಥೆಗೆ ಸೀಮಿತವಾದದ್ದಲ್ಲ. ಅದು ಆತ್ಮವಿಶ್ವಾಸ, ಉತ್ಸಾಹ, ಮುನ್ನುಗ್ಗುವ ಹುಮ್ಮಸ್ಸು, ಭವಿಷ್ಯದ ಬಗ್ಗೆ ಆಶಾನೋಟ, ಹೊಸಹೊಸದನ್ನು ಅನುಭವಿಸುವ, ಕಲಿತುಕೊಳ್ಳುವ ಬಯಕೆ – ಇವುಗಳನ್ನು ಪ್ರತಿನಿಧಿಸುತ್ತದೆ. ಅಂತರಂಗದ ಈ ಜೀವಂತ, ಕಾರ್ಯಶೀಲ ಮನೋಭಾವವೇ **'ಚೇತನ'**. ಇಂಥ ಲವಲವಿಕೆಯಿಂದ ಕೂಡಿರುವವನೇ **'ಯುವಕ.'** ಆತನು ಪ್ರತಿನಿಧಿಸುವ ಚೇತೋಹಾರಿಯಾದ ಮಾನಸಿಕ ಚಿಲುಮೆಯನ್ನೇ **'ಯುವಚೇತನ'** ಎನ್ನುವುದು.

**ಉತ್ತಮ ಯುವಕ :** ಇಂದು ಯುವಕರೆಂದರೆ ಅವಿಧೇಯರಾದವರು, ಕಾಲಹರಣ ಮಾಡುವವರು ಎಂಬ ತಪ್ಪುಕಲ್ಪನೆಯೇ ಜಾಸ್ತಿ. ಅಂಥವರ ವರ್ತನೆಯೇ ನಮ್ಮ ಕಣ್ಣಿಗೆ ಎದ್ದುಕಾಣುವುದರಿಂದ ಹೀಗಾಗಿರಬಹುದು. ಆದರೆ ಬಹುಪಾಲು ಯುವಕರು ಹಾಗೆ ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಯುವಕನಾದವನು ಬೆಳೆಸಿಕೊಳ್ಳಬೇಕಾದ ಕೆಲವು ಲಕ್ಷಣಗಳನ್ನು ತಿಳಿದುಕೊಳ್ಳುವುದು ಪ್ರಯೋಜನಕಾರಿಯಾಗಬಹುದು:

**೧. ವಿನಯವಂತಿಕೆ:** ಒಳ್ಳೆಯ ಯುವಕನ ಮೊದಲ ಗುಣವೇ ವಿನಯವಂತಿಕೆ. ಅದು ಹಿರಿಯರ ಮಾರ್ಗದರ್ಶನ ಮತ್ತು ವ್ಯಕ್ತಿತ್ವದ ಬೆಳವಣಿಗೆಗಳಿಗೆ ತನ್ನನ್ನು ತಾನು ಮುಕ್ತಗೊಳಿಸಿಗೊಂಡ ಸಕಾರಾತ್ಮಕ ಗುಣ. ಅಹಂಕಾರವೆನ್ನುವುದು ಇಂಥ ಬೆಳವಣಿಗೆಗೆ ಧಕ್ಕೆಯಾಗುವಂಥ ಗುಣ. ವಿನಯವಂತನಾದವನು ಮುಕ್ತಭಾವದಿಂದ ಒಳ್ಳೆಯ ವಿಚಾರಗಳಿಗೆ ಮತ್ತು ಒಳ್ಳೆಯ ಪ್ರಭಾವಗಳಿಗೆ ತನ್ನನ್ನು ತಾನು ತೆರೆದುಕೊಳ್ಳುತ್ತಾನೆ. ಅಹಂಕಾರಿಯಾದವನು ಅಂತಹ ಜೀವನಪೌಷ್ಟಿಕ ವಿಚಾರಗಳು ತನ್ನಲ್ಲಿ ಪ್ರವೇಶಿಸಲು ಬಿಡುವುದೇ ಇಲ್ಲ.

**೨. ಕೃತಜ್ಞತೆ :** ಯುವಕರು ತಮ್ಮ ಪೋಷಕರಿಂದ ಮತ್ತು ಒಟ್ಟಾರೆ ಸಮಾಜದಿಂದ ಅನೇಕ ಸೌಲಭ್ಯಗಳನ್ನು ಮತ್ತು ಸವಲತ್ತುಗಳನ್ನು ಪಡೆದುಕೊಳ್ಳುತ್ತಾರೆ. ಇಂದಿನ ತಂದೆ–ತಾಯಿಗಳಂತೂ ವಾಹನ, ಮೊಬೈಲ್ ಫೋನ್, ಇಲೆಕ್ಟ್ರಾನಿಕ್ ಉಪಕರಣಗಳು ಮುಂತಾದ ಭೋಗವಸ್ತುಗಳ ರಾಶಿಯನ್ನೇ ತಮ್ಮ ಹದಿಹರೆಯದ ಮಕ್ಕಳಿಗೆ ಒದಗಿಸುತ್ತಾರೆ. ಅದಕ್ಕೆ ಮೇಲೆ, ಧಾರಾಳವಾದ ಹಣವನ್ನೂ ನೀಡುತ್ತಾರೆ. ಇವೆಲ್ಲವುಗಳನ್ನು ಪಡೆದುಕೊಂಡ ಯುವಕ, ಅವು ತನಗೆ 'ದಕ್ಕಬೇಕಾದದ್ದು' ಎನ್ನುವ ಹಕ್ಕಿನ ಅಥವಾ ಅಧಿಕಾರದ ಮನೋಭಾವವನ್ನು ಬೆಳೆಸಿಕೊಳ್ಳುತ್ತಾನೆ. 'ಕೃತಜ್ಞತೆ'ಯನ್ನು ಬೆಳೆಸಿಕೊಳ್ಳುವುದೇ ಇಲ್ಲ. ಬಹಳಷ್ಟು ಸಂದರ್ಭಗಳಲ್ಲಿ, ಈ ಬಗೆಯ ವರ್ತನೆಯು ಹದಿಹರೆಯದ ಮಕ್ಕಳಲ್ಲಿ ಕಂಡುಬರುವ ಸಹಜಸ್ವಭಾವ ಎಂದು ಪೋಷಕರು ಅದನ್ನು ಕ್ಷಮಿಸಿಬಿಡುತ್ತಾರೆ. ಆದರೆ ಈ ಗುಣವು ಅವರು ವಯಸ್ಕರಾದ ಮೇಲೂ ಮುಂದುವರೆಯುವುದು ಕಂಡುಬರುತ್ತದೆ. ಇದರಿಂದ ಪೋಷಕರಿಗಷ್ಟೇ ಅಲ್ಲ, ಸಮಾಜಕ್ಕೂ ಬಹಳಷ್ಟು ಹಾನಿಯುಂಟಾಗುತ್ತದೆ. ಹೀಗಾಗಿ ಹಣದ ಮತ್ತು ಸವಲತ್ತುಗಳ ಮೌಲ್ಯ ಅಥವಾ ಬೆಲೆಯನ್ನು ಯುವಕರಲ್ಲಿ ಮೂಡಿಸುವುದು ಅತ್ಯಂತ ಅವಶ್ಯ. ಈ ಸವಲತ್ತುಗಳು ಪೋಷಕರು ಕಠಿಣ ಪರಿಶ್ರಮದಿಂದ ಗಳಿಸಿದವು; ವಾತ್ಸಲ್ಯದಿಂದ ಅವರು ತನಗೆ ಅವನ್ನು ಒದಗಿಸಿಕೊಟ್ಟಿದ್ದಾರೆ ಎಂಬ ಅಂಶ ಪ್ರತಿಯೊಬ್ಬ ಯುವಕನ ಮನಸ್ಸಿನಲ್ಲಿ ಬೇರೂರಬೇಕು. ಇಲ್ಲಿ 'ಹಣ' ಅಥವಾ 'ವಸ್ತು'ಗಳು ಪ್ರಧಾನವಾಗಬಾರದು. ಅವುಗಳನ್ನು ಒದಗಿಸುವುದರ ಹಿಂದಿನ ಪೋಷಕರ 'ಪ್ರೀತಿ' ಮತ್ತು 'ವಾತ್ಸಲ್ಯ'ಗಳೇ ಪ್ರಧಾನವಾಗಬೇಕು. ಈ ಬಗೆಯ ಪ್ರೌಢ ಮನೋಭಾವ ಇರುವ ಯುವಕನೊಬ್ಬ ಮಾತ್ರ ಉತ್ತಮ ಪ್ರಜೆಯಾಗಿ ಬೆಳೆಯಲು ಸಾಧ್ಯ.

**೩. ಪ್ರಾಮಾಣಿಕತೆ ಮತ್ತು ಜವಾಬ್ದಾರಿತನ:** ತಮ್ಮ ತಪ್ಪುಗಳಿಗಾಗಿ ಅಥವಾ ದೋಷಗಳಿಗಾಗಿ ಇತರರನ್ನು ದೂರುವುದು ಯುವಕರಲ್ಲಿ ಕಂಡುಬರುವ ಒಂದು ಅಪ್ರಬುದ್ಧ ಗುಣ. ತಮ್ಮ ತಂದೆತಾಯಿಗಳನ್ನೋ, ಶಿಕ್ಷಕರನ್ನೋ, ಸ್ನೇಹಿತರನ್ನೋ ಸ್ವಂತ ಸಮಸ್ಯೆಗಳಿಗಾಗಿ ಅವರು ದೂರುತ್ತಾರೆ. ಮತ್ತೆ ಮತ್ತೆ ತಮ್ಮ ದೋಷಪೂರಿತ ನಡವಳಿಕೆಯಿಂದ ಹೊಸ ಹೊಸ ಸಮಸ್ಯೆಗಳಿಗೆ ಮತ್ತು ಕಷ್ಟಗಳಿಗೆ ಸಿಕ್ಕಿಹಾಕಿಕೊಳ್ಳುತ್ತಾರೆ. ಇದು ಕುಟುಂಬ ಮತ್ತು ಸಮಾಜಗಳೆರಡರ ಮೇಲೆಯೂ ದುಷ್ಪರಿಣಾಮವನ್ನು ಬೀರುತ್ತದೆ. ಅದಕ್ಕಾಗಿ, ಎಲ್ಲ ಕೆಲಸದಲ್ಲಿಯೂ **'ಪ್ರಾಮಾಣಿಕತೆ'** ಮತ್ತು

**'ಜವಾಬ್ದಾರಿತನ'**ದ ಆವಶ್ಯಕತೆಯನ್ನು ಯುವಕರಲ್ಲಿ ಮೂಡಿಸುವುದು ಅತ್ಯಂತ ಮಹತ್ವವಾದುದು. 'ನನ್ನ ಪ್ರತಿಯೊಂದು ಕ್ರಿಯೆಯ ಫಲವನ್ನು ಅನುಭವಿಸಬೇಕಾದವನು ನಾನೇ', 'ನನ್ನ ಪ್ರತಿಯೊಂದು ತಪ್ಪಿನ ದುಷ್ಪರಿಣಾಮವನ್ನು ನಾನೇ ಅನುಭವಿಸಬೇಕು' – ಈ ಬಗೆಯ ಜವಾಬ್ದಾರಿ ಭಾವನೆಯು ಮನದಾಳದಲ್ಲಿ ಹೊಕ್ಕಾಗ ಸಹಜವಾಗಿಯೇ ಯುವಕರ ವ್ಯಕ್ತಿತ್ವದಲ್ಲಿ ಸಕಾರಾತ್ಮಕ ಪರಿವರ್ತನೆ ಮೂಡಿಬರುತ್ತದೆ. ಆಗ ಪ್ರಾಮಾಣಿಕತೆಯೆನ್ನುವುದು ಯುವಕರ ವ್ಯಕ್ತಿತ್ವದ ಸಹಜ ಲಕ್ಷಣವಾಗಿ ವ್ಯಕ್ತವಾಗುತ್ತದೆ.

**೪. ಗೌರವ :** 'ಅವಿಧೇಯತೆ'ಗೆ ಕಾರಣ 'ಗೌರವ ಭಾವನೆ'ಯ ಅಭಾವ. ಇದಕ್ಕೆ ಬಹುಮಟ್ಟಿಗೆ ವಯಸ್ಕರೂ ಕಾರಣರಾಗುತ್ತಾರೆ. ವಯಸ್ಕರು ನಡೆಸುವ ಮೌಲ್ಯರಹಿತ ಜೀವನ ಯುವಕರಲ್ಲಿ ಅವರ ಬಗ್ಗೆ ತಿರಸ್ಕಾರ ಮನೋಭಾವನೆಯನ್ನು ಮೂಡಿಸುತ್ತದೆ. ತಾವು ಆದರ್ಶವಾಗಿ ಭಾವಿಸಬಹುದಾದ ವಯಸ್ಕರಿಗೆ ಯುವಕರು ಖಂಡಿತ ಗೌರವವನ್ನು ತೋರುತ್ತಾರೆ. ಆದರೆ ಅಂಥವರ ಸಂಖ್ಯೆ ಕ್ರಮೇಣ ಕಡಮೆಯಾಗುತ್ತಿರುವುದು ದುರದೃಷ್ಟದ ಸಂಗತಿ. ತಮ್ಮಲ್ಲಿಯೇ ತಮಗೆ ವಿಶ್ವಾಸ ಅಥವಾ ಗೌರವಗಳಿಲ್ಲದಿರುವುದೂ ಯುವಕರ ಗೌರವಹೀನತೆಗೆ ಇನ್ನೊಂದು ಕಾರಣ. ಯಾವ ವ್ಯಕ್ತಿ ತನ್ನಲ್ಲಿಯೇ ಕೀಳರಿಮೆಯನ್ನು ಬೆಳೆಸಿಕೊಂಡಿರುತ್ತಾನೋ, ಅಂಥವನು ಇತರರಿಗೆ ಗೌರವವನ್ನು ನೀಡುವಲ್ಲಿ ಅಸಮರ್ಥನಾಗುತ್ತಾನೆ. ಇತರರಿಗೆ ಗೌರವವನ್ನು ನೀಡುವುದು ಆತ್ಮಗೌರವದ ಬಾಹ್ಯ ಅಭಿವ್ಯಕ್ತಿಯೆಂದು ಹೇಳಬಹುದು. ಯುವಕರು ತಮ್ಮ ಬಗ್ಗೆ ಅಪನಂಬಿಕೆಯನ್ನು ಬೆಳೆಸಿಕೊಳ್ಳಲು ಹಲವಾರು ಮನೋವೈಜ್ಞಾನಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಸಮಸ್ಯೆಗಳೇ ಕಾರಣ. ಅವುಗಳಿಗೆ ಪರಿಹಾರ ಕಂಡುಹುಡುಕಿ, ಯುವಕರು 'ಆತ್ಮಗೌರವ'ವನ್ನು ಬೆಳೆಸಿಕೊಳ್ಳಲು ಪ್ರೋತ್ಸಾಹ ನೀಡುವುದು ಸಮಾಜದ ಹಿರಿಯರ ಕರ್ತವ್ಯ. ಆತ್ಮಗೌರವವನ್ನು ಪಡೆದುಕೊಂಡ ಯುವಕರು ಸಹಜವಾಗಿಯೇ ತಮ್ಮ ಸುತ್ತಮುತ್ತಲಿನವರಲ್ಲಿ ಗೌರವಭಾವನೆಯನ್ನು ಬೆಳೆಸಿಕೊಳ್ಳುತ್ತಾರೆ. ಇದು ಅವರ ವ್ಯಕ್ತಿಗತ ಜೀವನಕ್ಕೆ ಮತ್ತು ಸಮಾಜದ ಕಲ್ಯಾಣಕ್ಕೆ ಅತ್ಯಂತ ಅವಶ್ಯವಾದುದು.

**೫. ಅನುಕಂಪ :** ಭಾರತೀಯ ಸಮಾಜವು ಇಂದು ಪಾಶ್ಚಾತ್ಯ ಭೋಗಜೀವನಕ್ಕೆ ಮಾರುಹೋಗಿದೆ. ಸ್ಪರ್ಧಾತ್ಮಕತೆ ಮತ್ತು ಸೌಲಭ್ಯ ಹೀನರು ಹಾಗೂ ಬಡಜನರ ಬಗ್ಗೆ ಅನಾದರ – ಇವು ಪಾಶ್ಚಾತ್ಯ ಸಂಸ್ಕೃತಿಯ ಎರಡು ಮುಖ್ಯ ಪಿಡುಗುಗಳು. ಇದರ ಪರಿಣಾಮವಾಗಿ, ಭೋಗವಸ್ತುಗಳ ಸಂಚಯನ ಮತ್ತು ಉಪಭೋಗ – ಇವಿಷ್ಟೇ ಇಡೀ ಜೀವನದ ಉದ್ದೇಶ ಎಂಬಂತೆ ಯುವಕರ ಮುಂದೆ ಪ್ರತಿಬಿಂಬಿಸಲಾಗುತ್ತಿದೆ. ಹೀಗಾಗಿ ಸಮಾಜದಲ್ಲಿ ಅಧಿಕಾಂಶ ಸಂಖ್ಯೆಯಲ್ಲಿರುವ ಉಪೇಕ್ಷಿತರು, ದೀನದಲಿತರ ಬಗ್ಗೆ ನಮ್ಮ ಯುವಕರಲ್ಲಿ ಅನುಕಂಪ ಮತ್ತು ಕಳಕಳಿಗಳು ಕಡಮೆಯಾಗುತ್ತಿವೆ. ಸಮಾಜದ ಸ್ವಾಸ್ಥ್ಯಕ್ಕೆ ಇದು ನಿಜಕ್ಕೂ ಆತಂಕಕಾರಿಯಾದ ವಿಷಯ. ಅಲ್ಲದೆ, ಆರ್ಥಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಸ್ತರಗಳಲ್ಲಿ ತಾವು ಏರಿರುವ ಸ್ಥಾನವನ್ನು ಪಡೆದುಕೊಳ್ಳಲು ಸಾಧ್ಯವಾಗದವರನ್ನು Loosers - **'ಸೋಲುಂಡವರು'** ಎಂದು ಕರೆದು ಹೀಯಾಳಿಸುವ ಪ್ರವೃತ್ತಿಯೂ ನಮ್ಮ ಯುವಕರಲ್ಲಿ ಹೆಚ್ಚಾಗಿ ಬೆಳೆಯುತ್ತಿದೆ. ಇದಂತೂ ಅಮೆರಿಕನ್ ಸಂಸ್ಕೃತಿಯ ವಿಕೃತ ಅನುಕರಣೆಯೇ ಸರಿ. ಇದಕ್ಕೆ ವಿರುದ್ಧವಾಗಿ ಭಾರತೀಯ ಸಂಸ್ಕೃತಿಯು **'ಸರ್ವೋದಯ'** ಅಂದರೆ ಎಲ್ಲರಿಗೂ ಹಿತವಾಗುವ ಉದ್ದೇಶವನ್ನು ಹೊಂದಿದೆ. ಸಮಾಜದ ಎಲ್ಲ ಸ್ತರದವರೂ ಗೌರವ ಮತ್ತು ಅಭಿಮಾನಗಳಿಂದ ಜೀವನ ಮಾಡಬೇಕೆಂಬ ಪ್ರತಿಪಾದನೆ ಅದರದು. ಹಾಗೆಂದೇ ನಮ್ಮ ಸಂಸ್ಕೃತಿಯಲ್ಲಿ **'ಅನುಕಂಪ', 'ಕರುಣೆ'** ಮುಂತಾದ ಸದ್ಗುಣಗಳ ವೃದ್ಧಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗುತ್ತದೆ. ಈ ಗುಣಗಳನ್ನು ಬೆಳೆಸಿಕೊಂಡ ಯುವಕರು ಸಮಾಜಕ್ಕೆ ಉತ್ತಮ ಕೊಡುಗೆಯನ್ನು ನೀಡುತ್ತಾರಲ್ಲದೆ, ತಮ್ಮ ಜೀವನವನ್ನೂ ಉಜ್ವಲಗೊಳಿಸಿಕೊಳ್ಳುತ್ತಾರೆ.

**ಯುವಕರ ಆವಶ್ಯಕತೆ:** ಎಷ್ಟೇ ಉತ್ಸಾಹ ಅಥವಾ ದೇಹಶಕ್ತಿ ಇದ್ದರೂ ಯುವಕರಲ್ಲಿ ಅನುಭವದ ಮತ್ತು ಪ್ರೌಢತೆಯ ಕೊರತೆ ಇದ್ದೇ ಇರುತ್ತದೆ. ಸೂಕ್ಷ್ಮಮನೋಭಾವದವರಾದ ಅವರು ಜೀವನದ ಹಲವು ಸನ್ನಿವೇಶಗಳಿಗೆ ಬಹಳ ಸಂವೇದನಾತ್ಮಕವಾಗಿ, ತೀವ್ರವಾಗಿ ಪ್ರತಿಕ್ರಿಯಿಸುತ್ತಾರೆ. ಹಳೆಯದರ ಬಗ್ಗೆ ಹಾಗೂ ಅದನ್ನು ಪ್ರತಿನಿಧಿಸುವ ವಯಸ್ಕರ ಬಗ್ಗೆ ಸಹಜವಾದ ಪ್ರತಿರೋಧ ಭಾವನೆ ಅವರಲ್ಲಿ ಮೈಗೂಡಿಕೊಂಡಿರುತ್ತದೆ. ತಮ್ಮ ಆಂತರಿಕ ಪ್ರತಿಭೆ ಮತ್ತು ಸಾಮರ್ಥ್ಯಗಳ ಬಗ್ಗೆ ಅವಶ್ಯಕ್ಕಿಂತ ಹೆಚ್ಚು ಆತ್ಮವಿಶ್ವಾಸ ಅವರಲ್ಲಿ ಕಾಣಬರುತ್ತದೆ. ಇದೇ ಹೆಚ್ಚಿನ ಸಂದರ್ಭಗಳಲ್ಲಿ 'ಅಹಂಕಾರ' ಮತ್ತು 'ದರ್ಪ'ವಾಗಿಯೂ ಕಾಣಿಸಿಕೊಳ್ಳುವುದುಂಟು. ಇದಲ್ಲದೆ, ಸರಿ–ತಪ್ಪುಗಳ, ನ್ಯಾಯ–ಅನ್ಯಾಯಗಳ ವಿಷಯದಲ್ಲಿ ಸರಿಯಾದ ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ಅವರು ಅಪಕ್ವತೆಯನ್ನು ತೋರುವುದೂ ಉಂಟು.

ಹೀಗಿರುವಾಗ, ಯುವಕರ ಬಗ್ಗೆ ನಮ್ಮ ದೃಷ್ಟಿಕೋನ ಹೇಗಿರಬೇಕು? ಬಹಳ ಸಂವೇದನಾಶೀಲವಾಗಿರಬೇಕು; ಅನುಕಂಪಭರಿತವಾಗಿರಬೇಕು; ಯುವಕರ ಸಮಸ್ಯೆಗಳ ಬಗ್ಗೆ ಸರಿಯಾದ ಪ್ರಜ್ಞೆಯಿಂದ ಕೂಡಿರಬೇಕು; ಅವರ ಅಗತ್ಯಗಳನ್ನು ಪೂರೈಸಿಕೊಡುವಲ್ಲಿ ಪ್ರೌಢತೆಯನ್ನು ನಾವು ಮೆರೆಯಬೇಕು. ಯುವಕರ ಅಗತ್ಯಗಳಾದರೂ ಏನು? ಸರಿಯಾದ ಮಾರ್ಗದರ್ಶನವೇ ಯುವಕರ ಮೂಲಭೂತ ಆವಶ್ಯಕತೆ. ಆ ಮಾರ್ಗದರ್ಶನದ ಪ್ರಕಾರ ತಮ್ಮ ಜೀವನದ ಗುರಿಯನ್ನು ಕಂಡುಕೊಳ್ಳುವಲ್ಲಿ ಮತ್ತು ಅದರ ಸಾಧನೆಗೆ ಸರ್ವಪ್ರಯತ್ನವನ್ನೂ ಮಾಡುವಲ್ಲಿ ಅವರಿಗೆ ಒತ್ತಾಸೆಯನ್ನು ನೀಡುವುದು ಮತ್ತು ಸಹಾಯವನ್ನು ಒದಗಿಸುವುದು – ಇದು ವಯಸ್ಕ ಸಮಾಜದ ಹೊಣೆಗಾರಿಕೆಯಷ್ಟೇ ಅಲ್ಲ, ಆದ್ಯ ಕರ್ತವ್ಯವೂ ಹೌದು.

**ವಯಸ್ಕರ ಅನಾದರ – ಯುವಕರ ತಿರಸ್ಕಾರ :** ಯುವ ಸಮುದಾಯದ ಒಳಿತಿನ ಮೇಲೆಯೇ ರಾಷ್ಟ್ರದ ಭವಿಷ್ಯ ನಿಂತಿದೆ. ಹೀಗಾಗಿ ಯುವಸಮುದಾಯದ ಶಿಕ್ಷಣ, ತರಬೇತಿ ಮತ್ತು ಮಾರ್ಗದರ್ಶನ ಸಮಾಜದ ಅತ್ಯವಶ್ಯಕ ಕಾರ್ಯಗಳಲ್ಲವೇ? ಹೌದಾದರೆ, ಅದರ ಬಗ್ಗೆ ವಯಸ್ಕರಾದ ನಾವು ಎಷ್ಟು ತಾನೇ ಗಮನಕೊಟ್ಟಿದ್ದೇವೆ? ಸ್ವಾಮಿ ವಿವೇಕಾನಂದರು ಪ್ರತಿಪಾದಿಸಿದ ಮಾನವನಿರ್ಮಾಣ ಮತ್ತು ಚಾರಿತ್ರ್ಯನಿರ್ಮಾಣದ ಶಿಕ್ಷಣ ನಮ್ಮ ಮಕ್ಕಳಿಗೆ ದೊರಕುತ್ತಿದೆಯೇ? ಇಂಥ ಮೌಲ್ಯಯುತವಾದ ಶಿಕ್ಷಣ ದೊರಕದಿದ್ದರೆ, ಸ್ವಸ್ಥ

ಸಮಾಜದ ನಿರ್ಮಾಣ ಆಗುವುದಾದರೂ ಹೇಗೆ? – ಈ ಎಲ್ಲ ವಿಷಯಗಳನ್ನು ಚಿಂತಿಸುವ ಸಾವಧಾನ ವಯಸ್ಕರಾದ ನಮಗೆ ಇಲ್ಲವೇ ಇಲ್ಲವಲ್ಲ! ಭೌತಿಕ ಸಂಪತ್ತನ್ನು ಸೃಷ್ಟಿಸುವುದರಲ್ಲಿಯೇ ನಮ್ಮೆಲ್ಲ ಶಕ್ತಿಯ ವ್ಯಯವೂ ಆಗುತ್ತಿದೆ. ಜೊತೆಗೆ, ಅದರ ಸದುಪಯೋಗ ಮಾಡಿಕೊಳ್ಳುವ ಮಾನವ ಸಂಪನ್ಮೂಲಗಳನ್ನೂ ಸೃಜಿಸುವುದು ಕೂಡ ನಮ್ಮ ಕರ್ತವ್ಯವಲ್ಲವೇ? ಆದರೆ, ಸಮಾಜದ ಬಹುತೇಕ ಜನರಲ್ಲಿ ಈ ಸಮಸ್ಯೆಯ ಅಗಾಧತೆಯ ಅರಿವಿನ ಅಭಾವ ಎದ್ದುಕಾಣುತ್ತಿದೆ. ಇನ್ನು ಕಾರ್ಯಾನ್ವಯಗೊಳಿಸುವ ಮಾತಂತೂ ದೂರವೇ ಉಳಿಯಿತು. ಇಂಥ ಅನಾದರದಿಂದ ಉಂಟಾಗುತ್ತಿರುವ ಸಾಮಾಜಿಕ ಅವ್ಯವಸ್ಥೆಯೇ ಇಂದು ನಾವು ಎದುರಿಸುತ್ತಿರುವ ಹಲವಾರು ಉಪದ್ರವಗಳಿಗೆ ಕಾರಣ.

**ಸಂಸ್ಕೃತಿಯ ಪೌಷ್ಟಿಕತೆ:** ಇದೇ ಸಂದರ್ಭದಲ್ಲಿ, ಪೀಳಿಗೆಯಿಂದ ಪೀಳಿಗೆಗೆ ಹೆಚ್ಚುತ್ತಲೇ ಇರುವ ಪಿಡುಗೊಂದನ್ನು ನಾವು ಗಮನಿಸಬೇಕು. ನಮ್ಮ ಪ್ರಾಚೀನ ಪರಂಪರೆ ಮತ್ತು ಮೌಲ್ಯಗಳ ಬಗ್ಗೆ ಯುವಜನರಲ್ಲಿ ಇರುವ ತಿರಸ್ಕಾರವೇ ಅದು. **ಸಂಸ್ಕೃತಿ, ಪರಂಪರೆ** – ಇವುಗಳು ಒಂದು ಸಮಾಜದ ಜೀವಸತ್ವಗಳು; ಸಮಾಜದ ಜೀವಂತಿಕೆಗೆ ಮತ್ತು ಚಲನಶೀಲತೆಗೆ ಅವಶ್ಯವಾದ ಪೌಷ್ಟಿಕಾಂಶಗಳು. ನಮ್ಮ ಪುರಾತನರ ಜೀವನಶೈಲಿ, ನಂಬಿಕೆ, ಆಚಾರ, ಜೀವನದೃಷ್ಟಿಗಳು ಶತಶತಮಾನಗಳ ಕಾಲಮಾನದ ಮೂಸೆಯಲ್ಲಿ ಪರಿಪಕ್ವಗೊಂಡು, ಸಂಸ್ಕರಣಗೊಂಡು, ಸಾರಗರ್ಭಿತವಾಗಿರುವುದನ್ನೇ ನಾವು 'ಸಂಸ್ಕೃತಿ' ಎನ್ನುತ್ತೇವೆ. ಈ ಸಂಸ್ಕೃತಿಯ ಬೇರನ್ನು ಹೀರಿಕೊಂಡೇ, ನಮ್ಮ ಜನರ ಹಲವಾರು ಪೀಳಿಗೆಗಳು ಈ ನಾಡಿನಲ್ಲಿ ಬಾಳಿಬದುಕಿವೆ, ಇನ್ನು ಮುಂದೆಯೂ ಬಾಳಿಬದುಕಬೇಕಾಗಿದೆ. ಇದೇ ನಮ್ಮ ನಾಗರಿಕತೆಯ ಚಿರಂತನತೆಯ ರಹಸ್ಯವೂ ಆಗಿದೆ. ಹೀಗಿರುವಾಗ, ಪಾಶ್ಚಾತ್ಯರ ಸವಕಲು ಆಚರಣೆಗಳ ಅಂಧಾನುಸರಣೆ ಮಾಡುತ್ತಿರುವ ನಮ್ಮ ಯುವಕರಲ್ಲಿ ವಿಷವಾಯುವಿನಂತೆ ಹಬ್ಬುತ್ತಿರುವ ನಮ್ಮ ಸಂಸ್ಕೃತಿಯ ಬಗೆಗಿನ ತಿರಸ್ಕಾರ ಭಾವನೆಯು, ಭವಿಷ್ಯದಲ್ಲಿ ನಮ್ಮನ್ನು ಎಲ್ಲಿಗೆ ತಾನೇ ಕರೆದೊಯ್ಯುತ್ತದೆ? ಮುಂದಿನ ಸಮಾಜದ ಸಂರಚನೆ ಯಾವ ತಾತ್ತ್ವಿಕ ಅಥವಾ ನೈತಿಕ ಸಿದ್ಧಾಂತಗಳ ಆಧಾರದ ಮೇಲೆ ನಿಲ್ಲುತ್ತದೆ? ಅವುಗಳನ್ನು ಆಚರಣೆಗೆ ತರುವಲ್ಲಿ ಮುಂದಿನ ಪ್ರಜೆಗಳಾದ ಇಂದಿನ ಯುವಕರ ಭೂಮಿಕೆ ಏನು? – ಈ ಗಂಭೀರ ಪ್ರಶ್ನೆಗಳು ತಲೆದೋರುತ್ತವೆ. ಇವುಗಳಿಗೆ ಸಮರ್ಥ ಪರಿಹಾರಗಳನ್ನು ಕಂಡುಕೊಳ್ಳುವಲ್ಲಿ ನಾವು ವಿಫಲರಾದರೆ, ನಮ್ಮ ಉಜ್ವಲ ಭವಿಷ್ಯದ ಕನಸು ಕನಸಾಗಿಯೇ ಉಳಿಯುವುದರಲ್ಲಿ ಸಂದೇಹವಿಲ್ಲ.

**ಯುವಚೇತನವೇ ರಾಷ್ಟ್ರೀಯ ಚೇತನ :** ಈ ಹಿನ್ನೆಲೆಯಲ್ಲಿ ಯುವಚೇತನದ ಪರಿಕಲ್ಪನೆಯನ್ನು ನಾವು ವಿಶ್ಲೇಷಿಸಬೇಕು. ಧೀಮಂತ ಮತ್ತು ಸದ್ಗುಣಸಂಪನ್ನ ಯುವಶಕ್ತಿಯನ್ನು ರಾಷ್ಟ್ರಾರಾಧನೆಗೆ ಆವಾಹಿಸುವ ಕೆಲಸವನ್ನೇ ಇಂದು ನಾವು ಅತ್ಯಗತ್ಯವಾಗಿ ಮಾಡಬೇಕಾಗಿರುವುದು. ಅದಕ್ಕಾಗಿ, ಆಧುನಿಕ ಯುವಕರಲ್ಲಿ ಕಂಡುಬರುತ್ತಿರುವ ವಿಪರೀತ ಭೋಗಪ್ರವೃತ್ತಿ ಮತ್ತು ಸ್ವಾರ್ಥಭಾವನೆಗಳಿಗೆ ಕಡಿವಾಣ ಹಾಕುವ ತುರ್ತು ಆವಶ್ಯಕತೆ ಈಗ ಎದ್ದುಕಾಣುತ್ತಿದೆ. ಈ ಕೆಟ್ಟ ಪ್ರವೃತ್ತಿಗೆ ಕಾರಣ, ಹಿಂದೆಯೇ ಹೇಳಿದಂತೆ, ಯುವಕರ ಮುಂದೆ ಉದಾತ್ತ, ನಿಸ್ವಾರ್ಥ ಆದರ್ಶವೊಂದನ್ನು ಇರಿಸಲು ನಾವು ಅಶಕ್ಯರಾಗಿರುವುದು; ಆ ಆದರ್ಶದ ಪೂರೈಕೆಯೇ ಜೀವನದ ಸಾಫಲ್ಯದ ಮಾನದಂಡ ಎಂದು ಅವರಿಗೆ ಮನಗಾಣಿಸಲು ವಿಫಲರಾಗಿರುವುದು. ಯಾವ ರಾಷ್ಟ್ರವು ಇದನ್ನು ಕೈಗೊಳ್ಳಲು ಸಾಧ್ಯವಾಗುವುದಿಲ್ಲವೋ, ಅದು ಸತ್ವಹೀನವೂ ನಿರ್ವೀರ್ಯವೂ ಆಗುತ್ತದೆ. ಜಗತ್ತಿನ ಇತಿಹಾಸದಿಂದ ನಾವು ಕಲಿಯಬೇಕಾದ ಒಂದು ಪ್ರಮುಖ ಪಾಠ ಇದು.

**ಆದರ್ಶವ್ಯಕ್ತಿ :** ಆದರ್ಶವೆಂಬುದು ಅಮೂರ್ತ ಕಲ್ಪನೆ. ಅದು ಸಾಕಾರಗೊಂಡಿರುವ ಒಬ್ಬ ವ್ಯಕ್ತಿ ಮಾತ್ರ ಆ ಆದರ್ಶದ ಗರಿಮೆಯ ಮಹತ್ವವನ್ನು ಹತ್ತುಹಲವು ಜನಗಳ ಮನಸ್ಸಿನಲ್ಲಿ ಬಿತ್ತಬಲ್ಲ. ಈ ಹಿನ್ನೆಲೆಯಲ್ಲಿ, ಯುವಕರ ಮುಂದೆ ನಾವು ಇರಿಸಬಹುದಾದ ಬಹು ಉನ್ನತ ಆದರ್ಶವ್ಯಕ್ತಿಯೆಂದರೆ ಸ್ವಾಮಿ ವಿವೇಕಾನಂದರು. ಅವರು ಯುವಕರ ಎರಡು ಪ್ರಮುಖ ಆವಶ್ಯಕತೆಗಳನ್ನು ಸಮರ್ಥವಾಗಿ ಪೂರೈಸುತ್ತಾರೆ: **೧. ವ್ಯಕ್ತಿಗತ ಚಾರಿತ್ರ್ಯನಿರ್ಮಾಣ ಮತ್ತು ೨. ಸಮುದಾಯ ಅಥವಾ ರಾಷ್ಟ್ರನಿರ್ಮಾಣ.**

ಸದ್ಗುಣಿಗಳಾಗಿದ್ದರೂ, ರಾಷ್ಟ್ರನಿರ್ಮಾಣಕ್ಕೆ ಕೊಡುಗೆ ನೀಡದಂಥ ಸ್ವಾರ್ಥಿ ಯುವಜನರ ಸಂಖ್ಯೆಯೇ ನಮ್ಮಲ್ಲಿ ಅಧಿಕ. ಇದಕ್ಕೆ ಕಾರಣ ನಮ್ಮ ದೋಷಪೂರಿತ ಶಿಕ್ಷಣ ಮತ್ತು ನಮ್ಮ ಭವ್ಯ ಪರಂಪರೆಯ ಬಗೆಗಿನ ಅವಜ್ಞೆ. ಈ ಎರಡೂ ದೋಷಗಳನ್ನು ಹೋಗಲಾಡಿಸಿ, ಮಾನವಸೇವೆಗೆ ಮುಡಿಪಾಗಿರುವ ಶೀಲವಂತ ಯುವಕರ ನಿರ್ಮಾಣಕ್ಕೆ ಇಂಬುಕೊಡುವ ಪ್ರೇರಣಾಶಕ್ತಿ ಇರುವುದು ಸ್ವಾಮಿ ವಿವೇಕಾನಂದರ ಸಂದೇಶಗಳಿಗೆ ಮಾತ್ರ. ಅವರು 'ತ್ಯಾಗ ಮತ್ತು ಸೇವೆ' ಎಂಬ ಅವಳಿ ಆದರ್ಶಗಳನ್ನು ಯುವಕರ ಮುಂದೆ ಇಟ್ಟರು. ಸ್ವಾತಂತ್ರ್ಯಪೂರ್ವದ ಯುವ ಪೀಳಿಗೆಗಳು ಇದಕ್ಕೆ ಓಗೊಟ್ಟಿದ್ದರಿಂದಲೇ ಸ್ವಾತಂತ್ರ್ಯ ಚಳುವಳಿಗೆ ಅಷ್ಟೊಂದು ಚೈತನ್ಯ ಒದಗಿಬಂದದ್ದು ಎಂದು ಎಲ್ಲ ಇತಿಹಾಸಜ್ಞರೂ ಒಪ್ಪುತ್ತಾರೆ. ಆದರೆ ಸ್ವಾತಂತ್ರ್ಯೋತ್ತರದ ಯುವಪೀಳಿಗೆಯ ಮೇಲೆ ಈ ಆದರ್ಶದ ಬೆಳಕು ಸಮಂಜಸವಾಗಿ ಪಸರಿಸಲಿಲ್ಲ. ನಮ್ಮ ಪ್ರಸ್ತುತ ಯುವಜನತೆ ಆದರ್ಶಹೀನರಾಗಿರುವುದಕ್ಕೆ ಇದೇ ಕಾರಣ.

**ಯುವಚೇತನ – ರಾಷ್ಟ್ರಚೇತನ:** ಯುವಜನತೆಯ ಚಾರಿತ್ರ್ಯ ನಿರ್ಮಾಣ ಮತ್ತು ರಾಷ್ಟ್ರನಿರ್ಮಾಣಗಳು ಪರಸ್ಪರ ಪೂರಕವಾದಂಥವು. ವ್ಯಷ್ಟಿಹಿತವೇ ಸಮಷ್ಟಿಹಿತವಲ್ಲವೇ?! ಅದಕ್ಕಾಗಿ ಬೇಕಾದ ನೈತಿಕ ಮತ್ತು ಆಧ್ಯಾತ್ಮಿಕ ಚೈತನ್ಯ ಎಲ್ಲಿಂದ ತಾನೇ ನಮಗೆ ಒದಗಿಬರುತ್ತದೆ? ಯುವಚೇತನವೆಂಬ ಅಮೂರ್ತವಾದ ಭಾವನೆಯನ್ನು ಮೂರ್ತೀಕರಿಸಿಕೊಂಡಿರುವ ಪರಿಪೂರ್ಣ ವ್ಯಕ್ತಿಯಿಂದ ಮಾತ್ರವೇ ಇದು ಸಾಧ್ಯ. ಅಂಥ ಅಪೂರ್ವವ್ಯಕ್ತಿಯೇ ಪೂಜ್ಯ ಸ್ವಾಮಿ ವಿವೇಕಾನಂದರು.

ಹೀಗೆ ನೈಜ ಅರ್ಥದಲ್ಲಿ ಸ್ವಾಮಿ ವಿವೇಕಾನಂದರೇ **'ಯುವಚೇತನ'**. ಅವರ ವ್ಯಕ್ತಿತ್ವ ಮಾತ್ರವೇ ಯುವಕರಿಗೆ ಜೀವದಾಯಿನಿ ಚೇತನವಾಗಿ ಪರಿಣಮಿಸಬಲ್ಲುದು. ಅದೇ ರಾಷ್ಟ್ರನಿರ್ಮಾಣಕ್ಕೂ ಚೈತನ್ಯವನ್ನು ನೀಡಬಲ್ಲುದು. ಹೀಗಾಗಿ ಯಾರು ಯುವಚೇತನರೋ, ಅವರೇ ರಾಷ್ಟ್ರಚೇತನರೂ ಆಗಿ ಪರಿಣಮಿಸುತ್ತಾರೆ. ಅಂಥ ಪರಮಾದ್ಭುತ ಚೇತನ ಸ್ವಾಮಿ ವಿವೇಕಾನಂದರು.

# ರಾಷ್ಟ್ರ ಜಾಗೃತಿಯ ಹರಿಕಾರ
## ಸ್ವಾಮಿ ವಿವೇಕಾನಂದ

ಸ್ವಾಮಿ ಭಜನಾನಂದ

*(ಹಿಂದಿನ ಸಂಚಿಕೆಯಿಂದ)*

*(ಹಿಂದಿನ ಸಂಚಿಕೆಯಲ್ಲಿ ಭಾರತೀಯ ರಾಷ್ಟ್ರೀಯ ಜಾಗರಣಕ್ಕೆ ವಿವೇಕಾನಂದರ ಕೊಡುಗೆಗಳಲ್ಲಿ ಮೊದಲನೆಯದಾದ ರಾಷ್ಟ್ರೀಯ ಪ್ರಜ್ಞೆಯ ಸೃಷ್ಟಿಯ ಬಗ್ಗೆ ಚರ್ಚಿಸಲಾಗಿದೆ.)*

### 2. ರಾಷ್ಟ್ರೀಯ ಜಾಗರಣದ ಭಾವನೆ

ರಾಷ್ಟ್ರೀಯ ಜಾಗರಣದ ಭಾವನೆ, ಅಂದರೆ ಇಡೀ ಭಾರತೀಯ ಜನರ ಜಾಗೃತಿಯ ಭಾವನೆಯ ಉಗಮ ಕಂಡುಬರುವುದು ಸ್ವಾಮಿ ವಿವೇಕಾನಂದರಲ್ಲಿಯೇ ಎಂದು ಧಾರಾಳವಾಗಿ ಹೇಳಬಹುದು. ಒಂದು ಕಡೆ ಸುಶಿಕ್ಷಿತ ಭಾರತೀಯರು ಪಾಶ್ಚಾತ್ಯ ಸಂಸ್ಕೃತಿಯ ಪರಿಚಯವನ್ನು ಪಡೆದುಕೊಂಡರು. ಇನ್ನೊಂದು ಕಡೆ ಪಾಶ್ಚಾತ್ಯ ವಿದ್ವಾಂಸರಾದ ಸರ್. ವಿಲಿಯಮ್ ಜೋನ್ಸ್, ವಿಲ್ಕಿನ್ಸ್, ಕೋಲ್‌ಬ್ರೂಕ್, ವಿಲ್ಸನ್ ಮುಂತಾದ ಭಾರತೀಯಶಾಸ್ತ್ರಜ್ಞರು ಪ್ರಾಚೀನ ಸಂಸ್ಕೃತ ಸಾಹಿತ್ಯದ – ಧಾರ್ಮಿಕ ಮತ್ತು ಲೌಕಿಕ – ಈ ಎರಡರ ಗರಿಮೆಯನ್ನೂ ಪುನರನ್ವೇಷಿಸಿದರು. ಇವೆರಡೂ ಭಾರತೀಯ ಮಾನಸಕ್ಕೆ ಸೃಜನಾತ್ಮಕ ಪ್ರೇರಣೆಯನ್ನು ನೀಡಿತು ಮತ್ತು ೧೯ನೆಯ ಶತಮಾನದಲ್ಲಿ ಜ್ಞಾನ ಮತ್ತು ಸಂಸ್ಕೃತಿಯ ಹೊಸ ವಿಶಾಲ ಆವರಣವು ಅನಾವರಣಗೊಳ್ಳುವಂತೆ ಮಾಡಿತು. ಇದು ಮುಖ್ಯವಾಗಿ ಬಂಗಾಳ ಪ್ರಾಂತ್ಯದಲ್ಲಿ, ಅಲ್ಪಪ್ರಮಾಣದಲ್ಲಿ ಭಾರತದ ಇತರ ಭಾಗಗಳಲ್ಲಿಯೂ, ಸಾಂಸ್ಕೃತಿಕ ನವಜಾಗರಣಕ್ಕೆ ನಾಂದಿ ಹಾಡಿತು. ಆದರೆ ಈ ನವಜಾಗರಣವು ಪಾಶ್ಚಾತ್ಯ ಸಂಸ್ಕೃತಿಯ ಕುರಿತು ಒಲವನ್ನು ತೋರ್ಪಡಿಸುತ್ತಿತ್ತು ಮತ್ತು ಮುಖ್ಯವಾಗಿ ಪಾಶ್ಚಾತ್ಯ ಮೌಲ್ಯಗಳಿಂದಲೇ ಪ್ರಭಾವಿತವಾಗಿತ್ತು. ಇದಲ್ಲದೆ, ಇದರ ಅಲ್ಪಸ್ವಲ್ಪ ಉಪಯುಕ್ತ ಫಲಗಳು ಕೂಡ ಸಮಾಜಸುಧಾರಣೆಯ ಆಂದೋಲನಗಳಿಂದ ಕ್ಷೋಭೆಗೊಂಡಿದ್ದವು.

ಈ ಹಂತದಲ್ಲಿ ಸ್ವಾಮಿ ವಿವೇಕಾನಂದರು ರಾಷ್ಟ್ರೀಯ ಜಾಗರಣದ ತಮ್ಮ ಸಂದೇಶದ ಮೂಲಕ ಪ್ರಸಿದ್ಧಿಗೆ ಬಂದರು. ಸ್ವಾಮೀಜಿಯ ಪ್ರಕಾರ 'ಜಾಗರಣ'ವೆನ್ನುವುದು ಮೂರು ಪ್ರಕ್ರಿಯೆಗಳನ್ನು ಹೊಂದಿದೆ: ೧. ಜನಸಾಮಾನ್ಯರ ಜಾಗೃತಿ ಮತ್ತು ಅವರನ್ನು ರಾಷ್ಟ್ರೀಯ ಅಭಿವೃದ್ಧಿಯಲ್ಲಿ ತೊಡಗಿಸಿಕೊಳ್ಳುವುದು. ೨. ಭಾರತದ ಪ್ರಾಚೀನ ಸಂಸ್ಕೃತಿಯ ರಕ್ಷಣೆ, ಪುನರುತ್ಥಾನ ಮತ್ತು ಪುನಸ್ಸಂಘಟನೆ, ಮತ್ತು ೩. ಭಾರತೀಯ ಅಂತಸ್ಸತ್ವದ ಆಧ್ಯಾತ್ಮಿಕ ಜಾಗೃತಿ.

**೧. ಜನಸಾಮಾನ್ಯರ ಜಾಗೃತಿ :** ರಾಜಾ ರಾಮಮೋಹನ ರಾಯ್, ಆರ್. ಜಿ. ರಾನಡೆ ಮತ್ತಿತರರು ಆರಂಭಿಸಿದ ಸಮಾಜ ಸುಧಾರಣಾ ಆಂದೋಲನಗಳು ಮತ್ತು ಮೇಲೆ ಪ್ರಸ್ತಾಪಿಸಿದ ಸಾಂಸ್ಕೃತಿಕ ನವಜಾಗರಣ – ಇವುಗಳ ಪ್ರಭಾವ ಶ್ರೀಮಂತ ಮತ್ತು ಮಧ್ಯಮ ವರ್ಗಗಳಿಗೆ ಮಾತ್ರ ಸೀಮಿತವಾಗಿದ್ದವು. ಸಮಾಜದ ಕೆಳವರ್ಗದವರಿಗೆ ಅವುಗಳಲ್ಲಿ ಸ್ಥಾನವಿರಲಿಲ್ಲ. ಇದಕ್ಕೆ ವಿರುದ್ಧವಾಗಿ, ಸ್ವಾಮಿ ವಿವೇಕಾನಂದರು ದೇಶದ ನಿಜವಾದ ಶಕ್ತಿಯು ಜನಸಾಮಾನ್ಯರಲ್ಲಿದೆ ಎಂದು ನಂಬಿದ್ದರು. ಅಲ್ಲದೆ, ತಮ್ಮ ಕಾರ್ಯದ ಪ್ರಾರಂಭದಿಂದಲೂ ಜನಸಾಮಾನ್ಯರ ಜಾಗೃತಿಯನ್ನೇ ತಮ್ಮ ದೃಷ್ಟಿಕೋನವಾಗಿ ಇಟ್ಟುಕೊಂಡಿದ್ದರು. ಅವರು ಹೇಳುತ್ತಾರೆ: "ಪ್ರಸ್ತುತ ನಿಮ್ಮ ಕರ್ತವ್ಯವೆಂದರೆ, ದೇಶದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಹೋಗುವುದು; ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹೋಗುವುದು; ಹೀಗೆ ಹೋಗಿ ಅಲ್ಲಿನ ಜನರಿಗೆ, ಸುಮ್ಮನೆ ಸೋಮಾರಿಗಳಾಗಿ ಕುಳಿತುಕೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ ಎಂಬುದನ್ನು ಅರ್ಥಮಾಡಿಸುವುದು; ಅವರ ನಿಜವಾದ ಪರಿಸ್ಥಿತಿಯ ಬಗ್ಗೆ ಅವರಿಗೆ ಅರಿವು ಮೂಡಿಸುತ್ತ ಹೀಗೆ ಹೇಳಿ – 'ಓ ನನ್ನ ಸಹೋದರರೇ, ಏಳಿ, ಎದ್ದೇಳಿ. ಇನ್ನೆಷ್ಟು ಕಾಲ ನೀವು ನಿದ್ರೆಯಲ್ಲಿಯೇ ಇರುತ್ತೀರಿ.' "

ನಿಜವಾಗಿಯೂ ಇಡೀ ಭಾರತ ದೇಶದಲ್ಲಿ, ರಾಜಕೀಯ ರಹಿತ ಜನಜಾಗೃತಿಯ ಕಾರ್ಯಕ್ರಮದ ಪರಿಕಲ್ಪನೆಯನ್ನು ಮೊಟ್ಟಮೊದಲಬಾರಿಗೆ ಮುಂದಿಟ್ಟವರೆಂದರೆ ಸ್ವಾಮಿ ವಿವೇಕಾ

ನಂದರೇ. ಅಮೇರಿಕ ದೇಶಕ್ಕೆ ತಾವು ಆಗಮಿಸಿದ ಸ್ವಲ್ಪ ಕಾಲದಲ್ಲಿಯೇ ಅವರು ಜನಸಾಮಾನ್ಯರ ಜಾಗರಣದ ಬಗೆಗಿನ ತಮ್ಮ ಯೋಜನೆಯ ಬಗ್ಗೆ ತಮ್ಮದೊಂದು ಪತ್ರ ದಲ್ಲಿ ಹೀಗೆ ಬರೆಯುತ್ತಾರೆ: "ನೂರಾರು ಸಾವಿರಾರು ಪುರುಷರು ಮತ್ತು ಮಹಿಳೆಯರು, ಪವಿತ್ರತೆಯ ಉತ್ಸಾಹದಿಂದ ಹುರಿದುಂಬಿದವರಾಗಿ, ಭಗವಂತನಲ್ಲಿ ಅಚಲವಾದ ಶ್ರದ್ಧೆಯನ್ನು ಹೊಂದಿ, ಬಡವರು, ದೀನದಲಿತರ ಮೇಲಿನ ತಮ್ಮ ಅನುಕಂಪ ದಿಂದ ಸಂವೇದಿತರಾಗಿ, ಈ ದೇಶದ ಉದ್ದಗಲಕ್ಕೂ ಮೋಕ್ಷದ ಸಂದೇಶವನ್ನೂ, ಉದ್ಧಾರದ ಸಂದೇಶವನ್ನೂ, ಹಾಗೆಯೇ ಸಮಾನತೆಯ ಸಂದೇಶವನ್ನೂ ಸಾರುತ್ತ ಹೋಗುವರು."

ಆ ಕಾಲದಲ್ಲಿ ಭಾರತವನ್ನು ಬ್ರಿಟಿಷರು ಆಳುತ್ತಿದ್ದರಷ್ಟೆ. ಹೀಗಾಗಿ ಸ್ವಾಮೀಜಿ ಜನಸಾಮಾನ್ಯರ ಜಾಗೃತಿಯ ತಮ್ಮ ಯೋಜನೆಯನ್ನು ಕಾರ್ಯಗತಗೊಳಿಸಲಾಗಲಿಲ್ಲ. ಅನಂತರ ಬರೆದ ಒಂದು ಪತ್ರದಲ್ಲಿ ಅವರು ತಾವು ಈ ಯೋಜನೆಯನ್ನು ಕೈಬಿಟ್ಟಿರುವುದಾಗಿ ಹೇಳಿಕೊಂಡಿದ್ದಾರೆ. ಈ ಜಾಗೃತಿಯ ಕಾರ್ಯಕ್ರಮವು ಕಾರ್ಯಗತವಾಗಿದ್ದರೆ, ಭಾರತದ ಭವಿಷ್ಯವೇ ಬದಲಾಗುತ್ತಿತ್ತು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

**೨. ಪ್ರಾಚೀನ ಭಾರತೀಯ ಸಂಸ್ಕೃತಿಯ ಪುನರುಜ್ಜೀವನ:** ಭಾರತೀಯ ಸಂಸ್ಕೃತಿಯು ಸುಮಾರು ೫,೦೦೦ ವರ್ಷಗಳಷ್ಟು ಹಿಂದಿನದು ಎಂದು ನಂಬಲಾಗಿದೆ. ಈ ಸುದೀರ್ಘ ಕಾಲಮಾನದಲ್ಲಿ, ಅದರಲ್ಲೂ ಕಳೆದ ಮೂರು ಸಾವಿರ ವರ್ಷಗಳಲ್ಲಿ, ಅಸಂಖ್ಯಾತ ಶಾಸ್ತ್ರಗ್ರಂಥಗಳು, ಭಾಷ್ಯಗಳು, ಪುರಾಣಕಥೆಗಳು, ಇತಿಹಾಸ ಕಾವ್ಯಗಳು, ತತ್ತ್ವಶಾಸ್ತ್ರೀಯ ಗ್ರಂಥಗಳು, ಜಾತಿಭೇದಗಳು ಮತ್ತು ಪದ್ಧತಿಗಳು ಹಾಗೂ ಬೆರಗುಗೊಳಿಸುವಷ್ಟು ಅಧಿಕ ಮೊತ್ತದ ಆಧ್ಯಾತ್ಮಿಕ ಜ್ಞಾನರಾಶಿಯ ವಿವಿಧ ಪ್ರಭೇದಗಳು – ಇವೆಲ್ಲ ಭಾರತೀಯ ಸಾಂಸ್ಕೃತಿಕ ಪರಂಪರೆಯ ಅವಿನಾಭಾವ ಅಂಗಗಳಾಗಿ ಕಾಲಾನುಕ್ರಮದಲ್ಲಿ ಸಂಚಯಗೊಂಡಿವೆ. ಆದರೆ ದುರದೃಷ್ಟವಶಾತ್, ೧೯ನೆಯ ಶತಮಾನದ ಸುಧಾರಣಾ ಆಂದೋಲನಗಳು ಈ ಅಮೂಲ್ಯ ಪರಂಪರೆಯ ಬಹಳಷ್ಟು ಭಾಗವನ್ನು ತಿರಸ್ಕರಿಸಿಬಿಟ್ಟವು.

ಇಂಥ ಸಂದಿಗ್ಧ ಸಂದರ್ಭದಲ್ಲಿ, ಸ್ವಾಮಿ ವಿವೇಕಾನಂದರ ಸಮಯೋಚಿತ ಅವತರಣವು ಪರಮಾದ್ಭುತವೂ, ವಿಶಿಷ್ಟವೂ ಆದ ಭಾರತೀಯ ಆಧ್ಯಾತ್ಮಿಕ ಪರಂಪರೆಯನ್ನು ಈ ತಿರಸ್ಕಾರ ಮತ್ತು ಅವಜ್ಞೆಗಳಿಂದ ರಕ್ಷಿಸಿತು. ಶ್ರೀಅರವಿಂದರು ಹೇಳುವ ಹಾಗೆ, ಸ್ವಾಮೀಜಿ 'ಪುನರ್ನಿರ್ಮಾಣದ ಮೂಲಕ ಸಂರಕ್ಷಣೆ' ಎಂಬ ಕಾರ್ಯನೀತಿಯನ್ನು ಅನುಸರಿಸಿದರು. ಪ್ರಾಚೀನ ಭಾರತೀಯ ಧಾರ್ಮಿಕ ಪರಂಪರೆಯು ಎರಡು ಆಯಾಮಗಳನ್ನು ಅಥವಾ ಮುಖಗಳನ್ನು ಹೊಂದಿದೆ ಎಂದು ಅವರು ತೋರಿಸಿಕೊಟ್ಟರು.

ಅವುಗಳಲ್ಲಿ ಮೊದಲನೆಯದು **ತತ್ತ್ವ**. ಇದು ಹಿಂದೂ ಧರ್ಮದ ಸಾರಸತ್ವವಾಗಿದೆ. ಆತ್ಮಚೈತನ್ಯದ ಪರಿಧಿಗೆ ಸಂಬಂಧ ಪಟ್ಟ ಕಾಲಾತೀತ ಸತ್ಯಗಳು ಮತ್ತು ಸಿದ್ಧಾಂತಗಳನ್ನು ಇದು ಒಳಗೊಂಡಿದೆ. ಈ ಸತ್ಯತತ್ತ್ವಗಳು ಈ ಪ್ರಪಂಚದ ಹಿನ್ನೆಲೆಯಲ್ಲಿರುವ ಇಂದ್ರಿಯಾತೀತವೂ ಅತ್ಯುತ್ಕೃಷ್ಟವೂ ಆದ ಸತ್ಯವನ್ನು ಪ್ರಕಟಪಡಿಸುತ್ತವೆ. ಆ ಸತ್ಯವು 'ಬ್ರಹ್ಮ' ಎಂಬ ಹೆಸರಿನ ಚೈತನ್ಯದ ಅನಂತರೂಪ ಎಂದು ಅವು ಪ್ರತಿಪಾದಿಸುತ್ತವೆ. ಹಾಗೆಯೇ ಇದೇ ತತ್ತ್ವವು ಮಾನವ ವ್ಯಕ್ತಿತ್ವದ ಪರಮೋತ್ಕೃಷ್ಟ ಆಯಾಮವಾದ ಸ್ವಯಂಪ್ರಜ್ಞಾಸ್ವರೂಪಿ ಆತ್ಮವೂ ಕೂಡ ಎಂದು ಬೋಧಿಸುತ್ತವೆ. ಈ ಬ್ರಹ್ಮ ಅಥವಾ ಆತ್ಮತತ್ತ್ವವೇ ಮಾನವನ ಪಾರಮಾರ್ಥಿಕ ಗುರಿಯಾಗಿದೆ. ಇದರ ಅಜ್ಞಾನವೇ ಮಾನವನ ಎಲ್ಲ ಸಂಕಷ್ಟಗಳಿಗೆ ಮತ್ತು ಬಂಧನಕ್ಕೆ ಕಾರಣ. ಇದರ ಸಾಕ್ಷಾತ್ಕಾರವೇ ಪರಿಪೂರ್ಣ ಸ್ವಾತಂತ್ರ್ಯ ಮತ್ತು ಸಾರ್ಥಕತೆಗಳಿಗೆ ಸಾಧನಭೂತವಾದದ್ದು. ಈ ಸತ್ಯಗಳನ್ನು ಕಂಡುಹಿಡಿದವರು ಪುರಾತನ ಋಷಿಗಳು. ಹಾಗೂ ಈ ಚಿರಂತನ ಸತ್ಯಗಳ ಅಧಿಕೃತತೆಯನ್ನು ಅಸಂಖ್ಯ ಮುನಿಗಳು ಮತ್ತು ಸಂತರು ತಮ್ಮ ಜೀವನದಲ್ಲಿ ಖಾತರಿಪಡಿಸಿದ್ದಾರೆ. ಈ ಸತ್ಯಗಳು ಧಾರ್ಮಿಕ ತತ್ತ್ವಶಾಸ್ತ್ರದ ಒಂದು ನಿರ್ದಿಷ್ಟ ಸಿದ್ಧಾಂತದಲ್ಲಿ ಅಡಕಗೊಂಡಿವೆ. ಇದನ್ನೇ **'ವೇದಾಂತ'** ಎನ್ನುವುದು.

ಪ್ರಾಚೀನ ಭಾರತೀಯ ಸಂಸ್ಕೃತಿಯ ಎರಡನೆಯ ಆಯಾಮವೆಂದರೆ **ಧರ್ಮ**. ಇದನ್ನು ಯಾವುದೇ ಪಂಗಡದ ಹೊರ ಆವರಣವೆಂದು ಪರಿಗಣಿಸಬಹುದು. ಮೌಲ್ಯಗಳು, ವಿಧಿಗಳು, ಪದ್ಧತಿಗಳು, ಕರ್ತವ್ಯಗಳು ಮತ್ತು ಸಾಮಾಜಿಕ ಸಂಸ್ಥೆಗಳನ್ನು ಇದು ಒಳಗೊಂಡಿರುತ್ತದೆ. ಇವುಗಳು ಕಾಲದಿಂದ ಕಾಲಕ್ಕೆ, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಮಾರ್ಪಡುವುದನ್ನು ನಾವು ಕಾಣಬಹುದು.

ಸುದೀರ್ಘಕಾಲದ ಪರಿಣಾಮವಾಗಿ ಜಾತಿವ್ಯವಸ್ಥೆ, ಅಸ್ಪೃಶ್ಯತೆ ಮುಂತಾದ ಹಲವಾರು ಮೂಢಾಚರಣೆಗಳು, ಅನವಶ್ಯಕ ಪದ್ಧತಿಗಳು, ಆಚರಣೆಗಳು ಮತ್ತು ಸಾಮಾಜಿಕ ಸಂಸ್ಥೆಗಳು ಧರ್ಮವೆಂಬ ಈ ಹೊರಕವಚದ ಅವಿಭಾಜ್ಯ ಅಂಗವಾಗಿರುವುದನ್ನು ಸ್ವಾಮಿ ವಿವೇಕಾನಂದರು ತೋರಿಸಿಕೊಟ್ಟರು. ಇವುಗಳಲ್ಲಿ ಅವಶ್ಯಕ ಪರಿವರ್ತನೆಗಳು ಜರುಗಲೇಬೇಕು. ಇದೇ ಸಮಯದಲ್ಲಿ ಧರ್ಮದ ಅಂತಸ್ಸತ್ವವಾದ ಚಿರಂತನ ಸತ್ಯಗಳು ಮತ್ತು ಸಿದ್ಧಾಂತಗಳನ್ನು ಪ್ರಕಟಗೊಳಿಸಿ ಅವುಗಳನ್ನು ಅನುಷ್ಠಾನಕ್ಕೆ ತರಬೇಕು; ನಮ್ಮ ಜೀವನದಲ್ಲಿ ಅವುಗಳನ್ನು ಪರೀಕ್ಷಿಸಿ ನೋಡಿ, ಜೀವನದಲ್ಲಿ ಅವನ್ನು ಒಂದು ಜೀವಂತಶಕ್ತಿಯನ್ನಾಗಿ ರೂಪಿಸಿಕೊಳ್ಳಬೇಕು. ಈ ಮಹಾನ್ ಕಾರ್ಯವನ್ನು ಆಧುನಿಕ ಕಾಲದಲ್ಲಿ ಶ್ರೀರಾಮಕೃಷ್ಣರು ಕೈಗೊಂಡು ಯಶಸ್ವಿಯಾಗಿ ನಿರ್ವಹಿಸಿದರು. ಸ್ವಾಮಿ ವಿವೇಕಾನಂದರು ತಮ್ಮ ಪರ್ಯಟನಗಳು, ಭಾಷಣಗಳು ಮತ್ತು ಲೇಖನಗಳ ಮೂಲಕ ವೇದಾಂತದ ಸಾರ್ವಕಾಲಿಕ ಸತ್ಯಗಳ ನೈಜಾರ್ಥ, ಉದ್ದೇಶ ಮತ್ತು ಮಹತ್ವಗಳ ಬಗ್ಗೆ ಜನರ ಮನಸ್ಸುಗಳನ್ನು ಸಚೇತನಗೊಳಿಸಿದರು. ಇದಲ್ಲದೆ, ಸಾಮಾನ್ಯ ಜನರೂ ಸುಲಭವಾಗಿ ಅರ್ಥ ಮಾಡಿಕೊಂಡು ಅನುಸರಿಸುವ ರೀತಿಯಲ್ಲಿ ಅದು ಎಲ್ಲರಿಗೂ ದೊರಕುವಂತೆ ಮಾಡಿದರು. ಇದೇ ಸಮಯದಲ್ಲಿ ಅವರು ಹಿಂದೂಧರ್ಮದ ಬಾಹ್ಯ ಕವಚವಾದ ಆಚರಣೆಯಲ್ಲಿ ಕಾಣಬರುತ್ತಿದ್ದ ಅಸ್ಪೃಶ್ಯತೆ, ಮಹಿಳೆಯರ ಬಗೆಗಿನ ನಿರ್ಲಕ್ಷ್ಯ, ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ

ಸಾಮಾಜಿಕ ಅನ್ಯಾಯ ಮುಂತಾದ ಹಲವಾರು ದೋಷಗಳ ಬಗ್ಗೆ ಜನರನ್ನು ಎಚ್ಚರಿಸಿದರು. ಈ ರೀತಿಯಾಗಿ ಸ್ವಾಮೀಜಿ, ಪ್ರಾಚೀನ ಭಾರತೀಯ ಸಂಸ್ಕೃತಿಯ ಪುನರುಜ್ಜೀವನ ಮತ್ತು ಪುನರ್ರಚನೆಗಳ ಹರಿಕಾರರಾದರು.

**೩. ಆಧ್ಯಾತ್ಮಿಕ ಜಾಗೃತಿ :** ಸ್ವಾಮಿ ವಿವೇಕಾನಂದರು ಬರಿಯ ಉಪದೇಶಕರಾಗಲಿ ಅಥವಾ ಪ್ರವಚನಕಾರರಾಗಲಿ ಆಗಿರಲಿಲ್ಲ. ಅವರು ಜೀವಿಗಳ ಜಾಗರಣಕಾರರು; ಭಾರತದ ಅಂತರಾತ್ಮವನ್ನು ಎಚ್ಚರಿಸಿದವರು. ಈ ದೃಷ್ಟಿಯಲ್ಲಿ ಅವರು ತಮ್ಮ ಗುರುಗಳಾದ ಶ್ರೀರಾಮಕೃಷ್ಣರ ಜೀವಿತಕಾರ್ಯದಲ್ಲಿ ಮುಖ್ಯ ಸಂದೇಶ ವಾಹಕರಾಗಿ ಸೇವೆ ಸಲ್ಲಿಸಿದರು. ಟಾಯನ್‌ಬೀ ಮುಂತಾದ ಇತಿಹಾಸಜ್ಞರ ಪ್ರಕಾರ, ಒಂದು ನಾಗರಿಕತೆ ಅಧಃಪತನವನ್ನು ತಲುಪಿದಾಗ, ಅದನ್ನು ಸರಿಪಡಿಸಲು ತಾನೇತಾನಾಗಿ ಒಂದು ಸಾಮಾಜಿಕ ಪ್ರತಿಕ್ರಿಯೆ ಹೊರಹೊಮ್ಮುವುದು. ಆ ನಾಗರಿಕತೆಯ ದೋಷಗಳನ್ನು ಪರಿಹರಿಸುವ ಉದ್ದೇಶವುಳ್ಳ ಅಲ್ಪಸಂಖ್ಯೆಯ ಸೃಜನಾತ್ಮಕ ಶಕ್ತಿಯ ಜನರು, ಒಬ್ಬ ಪ್ರವಾದಿ ಅಥವಾ ಮಹಾತ್ಮರ ಸುತ್ತ ನೆರೆಯುವರು. ಇದು ಭಗವದ್ಗೀತೆಯ ಪ್ರಸಿದ್ಧ ಆಶ್ವಾಸನೆಗೆ ಪೂರಕವಾಗಿಯೇ ಇದೆ. ಧರ್ಮವು ಕಳೆಗುಂದಿದಾಗ, ಅವತಾರವೆಂದು ಕರೆಯಲಾಗುವ ಭಗವಂತನ ವಿಶೇಷ ಅಭಿವ್ಯಕ್ತಿಯು ಒಂದು ವಿನೂತನ ಸಂದೇಶ ಮತ್ತು ಕಾರ್ಯಯೋಜನೆಯೊಂದಿಗೆ, ಈ ಭೂಮಿಯ ಮೇಲೆ ಅವತರಿಸುವುದು ಎಂದು ಭಗವದ್ಗೀತೆ ಹೇಳುತ್ತದೆ. ಸ್ವಾಮಿ ವಿವೇಕಾನಂದರು ಶ್ರೀರಾಮಕೃಷ್ಣರನ್ನು ವರ್ತಮಾನ ಯುಗದ ಅವತಾರಪುರುಷರೆಂದು ಪರಿಗಣಿಸಿದ್ದರು. ತಮ್ಮ ಸಂದೇಶದ ಮೂಲಕವಾಗಿ ಶ್ರೀರಾಮಕೃಷ್ಣರು ಭಾರತೀಯ ಧರ್ಮ ಮತ್ತು ಸಂಸ್ಕೃತಿಯ ಪುನರುಜ್ಜೀವನದ ಅಡಿಪಾಯವನ್ನು ಹಾಕಿದ್ದರು. ತಮ್ಮ ಅತಿಮಾನುಷ ಆಧ್ಯಾತ್ಮಿಕ ಶಕ್ತಿಯಿಂದ ಅಗಾಧ ಆಧ್ಯಾತ್ಮಿಕ ಶಕ್ತಿಯ ಆಗರವನ್ನೇ ನಿರ್ಮಾಣ ಮಾಡಿದ್ದರು. ಸ್ವಾಮಿ ವಿವೇಕಾನಂದರು ಈ ಆಧ್ಯಾತ್ಮಿಕ ಶಕ್ತಿಯು ಸಮಾಜವನ್ನು ತಲುಪಲು ಬೇಕಾದ ಮುಖ್ಯ ವಾಹಿನಿಯಾಗಿ ಕಾರ್ಯನಿರ್ವಹಿಸಿದರು. ಶ್ರೀರಾಮಕೃಷ್ಣರ ಆಧ್ಯಾತ್ಮಿಕ ಶಕ್ತಿಯು ಜನರನ್ನು ಸ್ಫೂರ್ತಿಗೊಳಿಸುವುದು; ಅವರ ಅಂತಶ್ಶಕ್ತಿಯನ್ನು ಬಡಿದೆಬ್ಬಿಸುವುದು, ಹಾಗೆಯೇ ಭಾರತದ ಅಂತಸ್ಸತ್ವವನ್ನೂ ಎಚ್ಚರಿಸುವುದು ಎಂದು ಸ್ವಾಮೀಜಿ ಭಾವಿಸಿದ್ದರು. ಉಪನಿಷತ್ತುಗಳಲ್ಲಿ ಬರುವ ಒಬ್ಬ ಹಿರಿಯ ಋಷಿಯು ಹೀಗೆ ಘೋಷಿಸುತ್ತಾನೆ: **'ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ'** – "ಏಳಿ, ಎದ್ದೇಳಿ, ವಿದ್ವಾಂಸರಾದವರನ್ನು ಸಮೀಪಿಸಿ, (ಆತ್ಮಜ್ಞಾನವನ್ನು) ತಿಳಿದುಕೊಳ್ಳಿ" ಎಂದು. ಮೂರು ಸಾವಿರ ವರ್ಷಗಳ ನಂತರ, ಒಬ್ಬ ಯುವ ಋಷಿಯು ಭಾರತದಾದ್ಯಂತ ಸಂಚರಿಸಿದನು; ಭೂಗೋಳದ ದೂರದೂರದ ಪ್ರದೇಶಗಳಿಗೆ ಪ್ರಯಾಣ ಮಾಡಿದನು; ಜನಸಾಮಾನ್ಯರೊಂದಿಗೆ ಬೆರೆಯುತ್ತಿದ್ದ ಈತನೂ ಪ್ರಾಚೀನಕಾಲದ ಋಷಿಯಂತೆ ಸಿಂಹ ಗರ್ಜನೆಯಿಂದ ಈ ಸಂದೇಶವನ್ನು ನೀಡಿದನು: "ಏಳಿ, ಎದ್ದೇಳಿ, ಗುರಿ ಮುಟ್ಟುವವರೆಗೂ ನಿಲ್ಲದಿರಿ."

ಪ್ರತಿಯೊಂದು ನಾಗರಿಕತೆಯಲ್ಲಿಯೂ ಒಂದು ವಿಶಿಷ್ಟ ಅಂಶವು ಪ್ರಧಾನವಾಗಿರುವುದನ್ನು ನಾವು ಕಂಡುಕೊಂಡಿದ್ದೇವೆ. ಸ್ವಾಮೀಜಿಯ ಪ್ರಕಾರ, ಭಾರತೀಯ ನಾಗರಿಕತೆಯ ಪ್ರಧಾನ ಸತ್ವವೆಂದರೆ 'ಆಧ್ಯಾತ್ಮಿಕತೆ.' ಅವರು ಹೀಗೆ ಹೇಳುತ್ತಾರೆ: "ಈ ಪುಣ್ಯ ಭೂಮಿಯಲ್ಲಿ, ಅದರ ಅಡಿಪಾಯ, ಆಧಾರ ಅಥವಾ ಜೀವ ಸತ್ವವೆನಿಸಿಕೊಳ್ಳುವುದು ಧರ್ಮ, ಕೇವಲ ಧರ್ಮ ಮಾತ್ರವೇ!" ಆದ್ದರಿಂದಲೇ ಸ್ವಾಮೀಜಿ ಭಾರತೀಯ ಜನರ ಪರಿಸ್ಥಿತಿಯನ್ನು ಉತ್ತಮಪಡಿಸುವ ಯಾವುದೇ ಪ್ರಯತ್ನ – ಸಾಮಾಜಿಕ, ಸಾಂಸ್ಕೃತಿಕ ಅಥವಾ ಆರ್ಥಿಕ ಅಭಿವೃದ್ಧಿಯಾಗಿದ್ದರೂ ಸರಿಯೆ – ಅದು ಆಧ್ಯಾತ್ಮಿಕತೆಯನ್ನೇ ಆಧಾರಶಿಲೆಯಾಗಿ ಹೊಂದಿರಬೇಕು ಎಂಬ ಅಭಿಪ್ರಾಯವನ್ನು ತಾಳಿದ್ದರು. ಏಕೆಂದರೆ, ರಾಷ್ಟ್ರೀಯ ಒಲವು ಎತ್ತಕಡೆ ಇದೆಯೋ ಅದನ್ನು ಅನುಸರಿಸುವುದು ಅತಿ ಕಡಮೆ ಪ್ರತಿರೋಧವನ್ನು ಎದುರಿಸುತ್ತದೆ ಎಂಬುದು ಅವರ ನಿಲುವಾಗಿತ್ತು. ಹಾಗೆಂದೇ ಸ್ವಾಮೀಜಿ ಹೇಳುತ್ತಾರೆ: "ಭಾರತವನ್ನು ಸಾಮಾಜಿಕ ಅಥವಾ ರಾಜಕೀಯ ಭಾವನೆಗಳಿಂದ ಪ್ರವಹಿಸುವ ಮೊದಲು, ಈ ಭೂಮಿಯನ್ನು ಆಧ್ಯಾತ್ಮಿಕ ಭಾವನೆಗಳಿಂದ ಮುಳುಗಿಸಿಬಿಡಿರಿ... ದಾನದ ಈ ಭೂಮಿಯಲ್ಲಿ, ಮೊಟ್ಟಮೊದಲನೆಯ ದಾನದ ಶಕ್ತಿಯನ್ನು ಬಳಸಿಕೊಳ್ಳೋಣ. ಅದೇ ಆಧ್ಯಾತ್ಮಿಕ ಶಕ್ತಿಯ ವಿತರಣೆ."

ಈ ಬಗೆಯ ಸಾಮಾಜಿಕ ದೃಷ್ಟಿಕೋನ, ಆಧ್ಯಾತ್ಮಿಕ ದರ್ಶನ ಮತ್ತು ಎಲ್ಲ ಚಟುವಟಿಕೆಗಳಲ್ಲಿಯೂ ಕಂಡುಬರುವ ಆಧ್ಯಾತ್ಮಿಕ ಆಯಾಮಗಳೇ, ಸ್ವಾಮಿ ವಿವೇಕಾನಂದರ ಸಾಮಾಜಿಕ ಮತ್ತು ರಾಜಕೀಯ ಅಭಿಪ್ರಾಯಗಳನ್ನು ಇತರ ಆಧುನಿಕ ಚಿಂತಕರಿಗಿಂತ ವಿಭಿನ್ನವನ್ನಾಗಿ ಮಾಡಿರುವುದು. ಪ್ರಸಕ್ತಕಾಲದ ಜಾಗತಿಕ ಪರಿಸ್ಥಿತಿಯಲ್ಲಿ ಈ ಭಾವನೆಗಳು ತುಂಬ ಆದರ್ಶಮಯವೂ, ಆದರ್ಶರಾಜ್ಯದ ಪರಿಕಲ್ಪನೆಯಾಗಿಯೂ ಇರುವಂತೆ ತೋರಬಹುದು. ಆದ್ದರಿಂದ ಅದು ಎಲ್ಲಕಡೆ ಅಂಗೀಕಾರವಾಗುವ ಸಿದ್ಧಾಂತವಾಗಲು ಸಾಧ್ಯವಾಗದೆ ಇರಬಹುದು ಎಂದು ಮೇಲುನೋಟಕ್ಕೆ ತೋರಬಹುದು. ಆದರೆ ಸ್ವಾಮೀಜಿಯವರು ಮಾನವತೆಯ ಭವಿಷ್ಯದ ಬಗ್ಗೆ ಬಹುದೂರದ ಕಾಣ್ಕೆಯಿದ್ದ ದ್ರಷ್ಟಾರ ಋಷಿಗಳಾಗಿದ್ದರು. ಮಾನವತೆಯು ಒಂದು ನವ ಯುಗದ ಉದಯದ ಮುಂಚೂಣಿಯಲ್ಲಿದೆ ಎಂಬುದನ್ನು ನಾವು ಮರೆಯಬಾರದು. ಈ ಅಂಶವನ್ನು ನಾವು ಮುಂದಿನ ಭಾಗವೊಂದರಲ್ಲಿ ಚರ್ಚಿಸಲಿದ್ದೇವೆ. ಭಾರತದ ಅಂತಸ್ಸತ್ವದ ಜಾಗರಣವನ್ನು ಕುರಿತಾದ ಈ ಚರ್ಚೆಯನ್ನು ಸ್ವಾಮಿ ವಿವೇಕಾನಂದರು ತಮ್ಮ ಸಂನ್ಯಾಸಿ ಸಹೋದರರು ಮತ್ತು ಶಿಷ್ಯರಿಗೆ ಆಲಂಬಜಾರ್ ಮಠದಲ್ಲಿ, ೧೮೯೭ರಲ್ಲಿ ನೀಡಿದ ಕರೆಯಲ್ಲಿ ಸಂಗ್ರಹಿಸಬಹುದು: "ಏಳಿ! ಎದ್ದೇಳಿ! ನಿಮ್ಮನ್ನು ಜಾಗೃತಗೊಳಿಸಿಕೊಳ್ಳಿ! ಉಳಿದವರನ್ನೂ ಜಾಗೃತಗೊಳಿಸಿ! ನೀವು ಮರಣಹೊಂದುವುದಕ್ಕೆ ಮುಂಚೆ ಮಾನವಜೀವಿತದ ಪರಮಾರ್ಥವನ್ನು ಸಾಧಿಸಿಕೊಳ್ಳಿ. ಏಳಿ, ಎದ್ದೇಳಿ. ನಿಮ್ಮ ಗುರಿಯನ್ನು ಸಾಧಿಸುವವರೆಗೂ ನಿಲ್ಲದಿರಿ!"

(ಮುಂದುವರೆಯುವುದು)



# ವಿಶೇಷ ಪುರವಣಿ

# ವಿವೇಕ ಯುವಚೇತನ ಶಿಬಿರ

(೨೦೧೩ರ ಸೆಪ್ಟೆಂಬರ್ ೨೩ ರಿಂದ ೨೫)



## ವಿವೇಕ ಯುವಚೇತನ ಶಿಬಿರ – ಪರಿಕಲ್ಪನೆ ಹಾಗೂ ಆವಶ್ಯಕತೆ

ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ. ೬೦ಕ್ಕಿಂತಲೂ ಅಧಿಕವಾಗಿ ಯುವಜನತೆಯಿದ್ದು, ಭಾರತವು ಈ ಯುವ ಶಕ್ತಿಯ ಒಂದು ಸಮೃದ್ಧ ತಾಣವಾಗಿದೆ. ಹಾಗೆಂದೇ ನಮ್ಮ ದೇಶದ ಭವಿಷ್ಯ ಉಜ್ವಲವಾಗಬೇಕಾದರೆ, ನಾವು ಒಂದು ಆದರ್ಶ ಮತ್ತು ಸಂಪದ್ಭರಿತ ಸಮಾಜವಾಗಿ ಮೂಡಿಬರಬೇಕಾದರೆ, ಈ ಯುವಶಕ್ತಿಯನ್ನು ಕ್ರೋಡೀಕರಿಸಬೇಕು. ಆಮೂಲಕ ಅದನ್ನು ಸಕಾರಾತ್ಮಕವಾದ ಶಕ್ತಿಯಾಗಿ ರೂಪಿಸಲು ಅದಕ್ಕೊಂದು ಸುಸಂಸ್ಕೃತ ದೃಷ್ಟಿಕೋನವನ್ನು ಒದಗಿಸಬೇಕು. ಅದಕ್ಕೆ ಅಗತ್ಯವಾದ ಬೌದ್ಧಿಕ, ನೈತಿಕ, ಆಧ್ಯಾತ್ಮಿಕ ಮತ್ತು ಸಾಮಾಜಿಕ ಉನ್ನತ ಮೌಲ್ಯಗಳನ್ನು ಒಳಗೊಂಡ ಯೋಗ್ಯಶಿಕ್ಷಣ, ತರಬೇತಿ ಹಾಗೂ ಅವಕಾಶಗಳನ್ನು ಕಲ್ಪಿಸಿಕೊಡುವ ಜವಾಬ್ದಾರಿ ಹಿರಿಯರಾದ ನಮ್ಮ ಮೇಲೆಯೇ ಇದೆ.

ಮೊತ್ತಮೊದಲು, ಇಂದಿನ ಕಲುಷಿತ ವಾತಾವರಣದಲ್ಲಿ ಜನಿಸಿ ಬೆಳೆಯುವ ಒಂದು ಮಗು ತನ್ನ ವ್ಯಕ್ತಿತ್ವದ ಶಕ್ತಿ ಮತ್ತು ಸಾಮರ್ಥ್ಯಗಳನ್ನು ಬೆಳೆಸಿಕೊಳ್ಳುವಲ್ಲಿ ಎದುರಿಸಬೇಕಾದ ಸಾಂಸ್ಕೃತಿಕ, ಸಾಮಾಜಿಕ, ಕೌಟುಂಬಿಕ ಹಾಗೂ ಮೌಲಿಕ ಸವಾಲುಗಳನ್ನು ಹಾಗೂ ಅವುಗಳ ಸಂಕೀರ್ಣತೆ ಮತ್ತು ವಿವಿಧ ಆಯಾಮಗಳನ್ನು ನಾವು ಅರ್ಥೈಸಿಕೊಳ್ಳಬೇಕು. ಸದ್ಯದ ಪರಿಸ್ಥಿತಿಯಲ್ಲಿ ಹೊರಜಗತ್ತಿನಲ್ಲಿ ಯುವಕರಿಗೆ ಸಿಕ್ಕದಿರುವ ಅರ್ಥಪೂರ್ಣ ಮಾರ್ಗದರ್ಶನ, ಪರಿಣಾಮಕಾರಿ ನಾಯಕತ್ವ, ಮಾನಸಿಕ ಶಕ್ತಿವರ್ಧಕ ಹಾಗೂ ಮೌಲ್ಯಾಧಾರಿತ ಆದರ್ಶ – ಇವೆಲ್ಲವುಗಳ ಕೊರತೆಗಳನ್ನು ನಾವು ಅರಿತುಕೊಳ್ಳಬೇಕು. ಅವರ ಮಾನಸಿಕ ಮತ್ತು ಕಾರ್ಯವೈಖರಿಯ ತುಮುಲಗಳನ್ನು ನಾವು ಗಂಭೀರವಾಗಿ ಪರಿಶೀಲಿಸಬೇಕು. ಯುವಕರ ವೈಫಲ್ಯಗಳಿಗಾಗಿ ಅವರನ್ನು ದೂಷಿಸಿ ಕಡೆಗಣಿಸುವ ಬದಲು, ಅಂತಹ ಕಷ್ಟಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸುವ ಒಂದು ನಿರ್ದಿಷ್ಟ ಕಾರ್ಯಪ್ರಣಾಳಿಯನ್ನು ರೂಪಿಸುವ ಜವಾಬ್ದಾರಿ ನಮ್ಮ ಮೇಲೇ ಇದೆ.

Garbage in, garbage out ಎನ್ನುವ ಹಾಗೆ ಯುವಕ ಯುವತಿಯರು ಇಂದಿನ ಸಮಾಜದಿಂದ, ಶಿಕ್ಷಣ ಪ್ರಕ್ರಿಯೆಯಿಂದ ಮತ್ತು ನಾಯಕತ್ವದ ಮಾದರಿಗಳಿಂದ ಏನನ್ನು ಗ್ರಹಿಸುತ್ತಾರೋ, ಅವರ ವೈಯಕ್ತಿಕ ಹಾಗೂ ಸಾಮಾಜಿಕ ನಡೆವಳಿಕೆಗಳು ಕೂಡ ಅದನ್ನೇ ಪ್ರತಿಫಲಿಸುತ್ತವೆ. ನಮ್ಮ ಇಂದಿನ ಸುತ್ತಮುತ್ತಲಿನ ವಾತಾವರಣದಲ್ಲಿ ವೈರಾಣುಗಳಂತೆ ಆಕ್ರಮಿಸಿಕೊಂಡಿರುವ ಟಿ.ವಿ. ಸಿನಿಮಾ ಮತ್ತಿತರ ದೃಶ್ಯಮಾಧ್ಯಮಗಳು, ಮೊಬೈಲ್‌ಫೋನ್, ಅಂತರ್ಜಾಲದಂತಹ ತಾಂತ್ರಿಕ ಮಾಧ್ಯಮಗಳು ಯುವಕರ ಮನಸ್ಸನ್ನು ಅಪಕ್ವ ಮನೋರಂಜನೆ, ಅಸಹ್ಯ ಭೋಗವಿಲಾಸಗಳು ಹಾಗೂ ಅತೀವ ಕ್ರೌರ್ಯಕ್ಕೆ ತೆರೆದಿಟ್ಟಿವೆ. ಅವರ ವ್ಯಕ್ತಿತ್ವವನ್ನೇ ಬಲಿತೆಗೆದುಕೊಂಡು ಅವರನ್ನು ದುರ್ಬಲರನ್ನಾಗಿಯೂ, ವಿವೇಕಹೀನರನ್ನಾಗಿಯೂ, ಆತ್ಮಗೌರವಶೂನ್ಯರನ್ನಾಗಿಯೂ, ತಮ್ಮ ಭವಿಷ್ಯದ ಬಗೆಗೆ ಸ್ಪಷ್ಟ ಕಲ್ಪನೆಯಿಲ್ಲದವರನ್ನಾಗಿಯೂ ಮಾಡಿಬಿಟ್ಟಿವೆ. ಆಮೂಲಕ ನಮ್ಮ ಇಂದಿನ ಯುವಕರು ಅವನತಿಯ ಮಾರ್ಗದಲ್ಲಿ ಜಾರುವಂತೆ ಮಾಡಿವೆ. ಈ ಅಧೋಗತಿಯ ಮಾರ್ಗದಿಂದ ನಮ್ಮ ಯುವಮಿತ್ರರನ್ನು ವಿಮುಖರನ್ನಾಗಿಸಿ ಸನ್ಮಾರ್ಗದಲ್ಲಿ ಪ್ರವೃತ್ತರನ್ನಾಗಿ ಮಾಡಲು ಬೇಕಾದ ಸಕಾರಾತ್ಮಕವಾದ ಪೂರಕ (Complementary) ಶಿಕ್ಷಣ ಹಾಗೂ ತರಬೇತಿ ಪ್ರಣಾಳಿಕೆಗಳನ್ನು ರೂಪಿಸಲು ಈಗಾಗಲೇ ಸಾಕಷ್ಟು ಸಮಯ ಮಿಂಚಿಹೋಗಿದೆ ಎಂದು ಕೈಕಟ್ಟಿ ಕೂರುವಂತಿಲ್ಲ.

ಈ ಕಷ್ಟಸಾಧ್ಯ ಕಾರ್ಯದ ಜವಾಬ್ದಾರಿ ಸಮಾಜದ ಯಾವುದೇ ಒಂದು ಭಾಗಕ್ಕೆ ಸೀಮಿತವಾಗಿಲ್ಲ. ಮನೆಯಲ್ಲಿ ಹಿರಿಯರು, ಶಾಲಾಕಾಲೇಜುಗಳ ಅಧ್ಯಾಪಕವೃಂದ, ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಕಾರ್ಯಕ್ಷೇತ್ರಗಳಲ್ಲಿ ಸಕ್ರಿಯರಾಗಿರುವವರು, ಮಠಮಾನ್ಯಗಳು – ಹೀಗೆ ಸಮಾಜದ ಎಲ್ಲ ಹಿರಿಯರೂ ಈ ಅವಶ್ಯಕ ಕಾರ್ಯದಲ್ಲಿ ಉತ್ಸಾಹದಿಂದ, ಜವಾಬ್ದಾರಿಯಿಂದ ಮತ್ತು ಅತ್ಯಂತ ತಾಳ್ಮೆಯಿಂದ ದುಡಿಯಲು ಮುಂದೆ ಬರಬೇಕು.

ಒಂದೇ ಮಾತಿನಲ್ಲಿ ಹೇಳುವುದಾದರೆ ನಮ್ಮ ಯುವಶಕ್ತಿಯು ನಮ್ಮ ಆಸ್ತಿ ಹೇಗೋ ಹಾಗೇ ಅದನ್ನು ತಿದ್ದಿ, ತೀಡಿ ಸರಿಯಾದ ದಾರಿಯಲ್ಲಿ ಪ್ರವಹಿಸುವಂತೆ ಮಾಡುವುದು ಕೂಡ ನಮ್ಮ

ಜವಾಬ್ದಾರಿಯೇ ಆಗಿದೆ. ನಾವೆಲ್ಲರೂ, ಈ ದಿಸೆಯಲ್ಲಿ ಶ್ರಮಿಸುತ್ತಿರುವ ವ್ಯಕ್ತಿಗಳು, ಮಾಧ್ಯಮಗಳು ಹಾಗೂ ಸರಕಾರಿ ಮತ್ತು ಸರಕಾರೇತರ ಸಂಘಸಂಸ್ಥೆಗಳ ಜೊತೆಗೆ ಹೆಗಲಿಗೆ ಹೆಗಲು ಕೊಟ್ಟು, ವಿಳಂಬವಿಲ್ಲದೆ ದುಡಿಯುವುದು ಈ ಸಮಸ್ಯೆಯ ಪರಿಹಾರಕ್ಕೆ ಇರುವ ಒಂದೇ ದಾರಿ. ನಾವು ನಮ್ಮ ಭವ್ಯ ಪರಂಪರೆಯಿಂದ ಆಧ್ಯಾತ್ಮಿಕವಾಗಿ, ಬೌದ್ಧಿಕವಾಗಿ ದೂರ ಸರಿಯುವಂತೆ ಮಾಡಿರುವ ಈಗಿನ ಶಾಲೆಗಳು, ವಿಶ್ವವಿದ್ಯಾನಿಲಯಗಳು ನಮ್ಮ ಯುವಜನಾಂಗಕ್ಕೆ ತನ್ನದೇ ಆದ ಸಂಸ್ಕೃತಿಯ ಹಿರಿಮೆಯನ್ನು ಗುರುತಿಸುವ ಹಾಗೂ ಸ್ವಂತಿಕೆಯನ್ನು ಬೆಳೆಸಿಕೊಳ್ಳಬಲ್ಲ ಉನ್ನತ ಅಭೀಪ್ಸೆ, ಚೈತನ್ಯ ಮತ್ತು ತ್ರಾಣಗಳನ್ನೇ ನಷ್ಟವಾಗಿಸಿಬಿಟ್ಟಿವೆ. ಈ ಪ್ರಕ್ರಿಯೆಯನ್ನು ಹಿಮ್ಮುಖಗೊಳಿಸಿ (reverse the process) ನಾವು ಕಳೆದುಕೊಂಡಿರುವುದನ್ನು ಮತ್ತೆ ಗಳಿಸಲು ದುಡಿಯುವುದೇ ನಮ್ಮ ಆದ್ಯತೆಯಾಗಬೇಕಿದೆ.

ಬಾಲ್ಯದಿಂದಲೇ ಮಕ್ಕಳ ಬುದ್ಧಿಶಕ್ತಿ (intellect), ಭಾವನೆ (emotions) ಮತ್ತು ಇಚ್ಛಾಶಕ್ತಿಗಳನ್ನು (will-power) ಸಮಾಜ ಮುಖಿಯನ್ನಾಗಿ ಮಾಡುವುದು ಅತ್ಯವಶ್ಯ. ಅದಕ್ಕಾಗಿ ಅವರಲ್ಲಿ ಸೇವಾಭಾವನೆ, ನೈತಿಕತೆ, ಆಧ್ಯಾತ್ಮಿಕತೆ, ಜ್ಞಾನದಾಹ, ಸ್ವಾರ್ಥತ್ಯಾಗ ಮುಂತಾದ ಸದ್ಗುಣಗಳ ಅಂಕುರಾರ್ಪಣೆ ಮಾಡಿ ಅವುಗಳನ್ನು ವೃದ್ಧಿಸಲು ಬೇಕಾದ ವಾತಾವರಣ ಮತ್ತು ಸಲಕರಣೆಗಳನ್ನು ಸೃಷ್ಟಿಸಬೇಕು.

ಈ ವಿಚಾರಧಾರೆಯ ಹಿನ್ನೆಲೆಯಲ್ಲಿ ಮೈಸೂರಿನ ಶ್ರೀರಾಮಕೃಷ್ಣ ಆಶ್ರಮವು ಹಮ್ಮಿಕೊಂಡಿದ್ದ ಹಲವು ಪ್ರಮುಖ ಕಾರ್ಯಕ್ರಮಗಳಲ್ಲಿ ೨೦೧೩ರ ಸೆಪ್ಟೆಂಬರ್ ೨೩ರಿಂದ ೨೫ರವರೆಗೆ ನಡೆದ 'ವಿವೇಕ ಯುವಚೇತನ ಶಿಬಿರ' ದ ಸಂಘಟನೆಯೂ ಒಂದಾಗಿತ್ತು. ಮೂರು ದಿನಗಳ ಈ ಶಿಬಿರವು ಗ್ರಾಮಾಂತರ ಪ್ರದೇಶಗಳ, ಹಾಗೂ ನಗರಗಳಲ್ಲಿರುವ ಪದವಿಕಾಲೇಜುಗಳ ವಿದ್ಯಾರ್ಥಿಗಳಿಗಾಗಿ ಮೀಸಲಾಗಿತ್ತು. ಇದಲ್ಲದೆ, ಈ ಶಿಬಿರದ ಉದ್ದೇಶಕ್ಕೆ ಪೂರಕವಾಗಿ **'ವಿವೇಕ ಭಾರತ ದರ್ಶನ', 'ಮಹಾಪುರುಷರ ಸಂಸ್ಕಾರ ಸೌರಭ', 'ಸೇವಾದೀಕ್ಷೆ', 'ವಿವೇಕದೀಕ್ಷೆ', 'ಗ್ರಾಮೀಣ ಪ್ರದೇಶಗಳಲ್ಲಿ ಗುಡಿಸಿಲಿನ ರೂಪದಲ್ಲಿರುವ ಭಗವಾನ್ ಶ್ರೀರಾಮಕೃಷ್ಣರ ದೇಗುಲ ಸ್ಥಾಪನೆ'** (Hut temple of Sri Ramakrishna), **'ದೀನಜನರ ಬಂಧು'**(Friends of the poor), **'ಮೌಲಿಕ ಚಿಂತನೆಗಳ ಶೋಧನೆ'** (Search for Great ideas) ಮುಂತಾದ ಅನೇಕ ಆಯಾಮಗಳಿರುವ ಸೇವಾ ಕಾರ್ಯಗಳನ್ನೂ ಭವಿಷ್ಯದಲ್ಲಿ ಹಮ್ಮಿಕೊಳ್ಳಲಾಗಿದೆ. ಆಮೂಲಕ ಯುವಶಕ್ತಿಯನ್ನು ಸಂಚಯಿಸಿ, ಉಳಿಸಿ, ಬೆಳೆಸಿ ಅದನ್ನು ರಾಷ್ಟ್ರದ ಚೈತನ್ಯ ಮತ್ತು ದೊಡ್ಡ ಸಂಪನ್ಮೂಲವನ್ನಾಗಿ ಮಾಡುವ ಸತ್ಸಂಕಲ್ಪದಿಂದ ಕೈಗೊಂಡಿದ್ದ ಒಂದು ಪ್ರಾಮಾಣಿಕ ಪ್ರಯತ್ನವೇ 'ವಿವೇಕ ಯುವಚೇತನ ಶಿಬಿರ'.

**ಈ ಶಿಬಿರದ ಧ್ಯೇಯೋದ್ದೇಶಗಳು ಹೀಗಿದ್ದವು:**

೧. ತರುಣರ ವ್ಯಕ್ತಿತ್ವ ವಿಕಸನಕ್ಕೆ ಅನುಕೂಲವಾಗುವಂತಹ ಜೀವನ ಕೌಶಲ್ಯಗಳಲ್ಲಿ ತರಬೇತಿ.

೨. ಜೀವನದಲ್ಲಿ ಉನ್ನತ ಮೌಲ್ಯಗಳನ್ನು ಹಾಗೂ ಆಧ್ಯಾತ್ಮಿಕ ದೃಷ್ಟಿಕೋನವನ್ನು ಅಳವಡಿಸಿಕೊಳ್ಳಲು ಸಹಕಾರಿಯಾಗುವ ಶಿಕ್ಷಣ.

೩. ವೈಚಾರಿಕ ಹಾಗೂ ಸೈದ್ಧಾಂತಿಕವಾಗಿ ಯಶಸ್ವೀ ಜೀವನವನ್ನು ನಡೆಸಲು ಅಗತ್ಯವಾದ ಸ್ಫೂರ್ತಿ ತುಂಬುವ ಕಾರ್ಯಕ್ರಮಗಳು.

೪. ರಾಷ್ಟ್ರಪ್ರೇಮ ಮತ್ತು ಉದಾತ್ತ ವಿಶ್ವಮಾನವ ದೃಷ್ಟಿಕೋನವನ್ನು ಸ್ಫುರಿಸಲು ಸಹಕರಿಸುವ ಪ್ರವಚನಗಳು ಮತ್ತು ಪ್ರಯೋಗಗಳು.

೫. ವಿವೇಕಾನಂದರ ಜೀವನ ಮತ್ತು ಸಂದೇಶಗಳ ಪರಿಚಯ.

೬. ಶಿಬಿರದ ಅಂತ್ಯದಲ್ಲಿ ಆಯ್ದ ತರುಣರಿಗೆ ಸ್ವಾಮಿ ವಿವೇಕಾನಂದರ ಜೀವನ ಮತ್ತು ಚರಿತ್ರೆಗೆ ಸಂಬಂಧಪಟ್ಟ ಪುಣ್ಯಸ್ಥಳಗಳಿಗೆ ಶೈಕ್ಷಣಿಕ ಸಂದರ್ಶನ ('ವಿವೇಕಭಾರತ ದರ್ಶನ').

ಈ ಶಿಬಿರಕ್ಕೆ ಅಭ್ಯರ್ಥಿಗಳಿಗೆ ಯಾವುದೇ ಶುಲ್ಕವನ್ನು ವಿಧಿಸಲಾಗಿರಲಿಲ್ಲ. ಕರ್ನಾಟಕದಾದ್ಯಂತ ಇರುವ ಸುಮಾರು ೧೦೦ಕ್ಕೂ ಹೆಚ್ಚು ಪದವಿ ಕಾಲೇಜುಗಳಿಂದ, ಮುಖ್ಯವಾಗಿ ಗ್ರಾಮಾಂತರ ಪ್ರದೇಶಗಳಿಂದ ವಿದ್ಯಾರ್ಥಿಗಳು ಆಗಮಿಸಿದ್ದರು. ಈ ಶಿಬಿರಕ್ಕೆ ತಲುಪಿ ಶಿಬಿರದಿಂದ ನಿರ್ಗಮಿಸುವವರೆಗೂ ಶಿಬಿರಾರ್ಥಿಗಳಿಗೆ ಅಗತ್ಯವಿರುವ ವಸತಿ ಮತ್ತು ಊಟೋಪಚಾರಗಳನ್ನು ಒದಗಿಸಲಾಗಿತ್ತು. ಇದಲ್ಲದೆ ಅವರಿಗೆ ಬಂದುಹೋಗುವ ಪ್ರಯಾಣದ ವೆಚ್ಚವನ್ನೂ ನೀಡಲಾಗಿತ್ತು.

ಈ ಶಿಬಿರದಲ್ಲಿ ನುರಿತ ಮತ್ತು ಪ್ರಾವೀಣ್ಯತೆ ಹೊಂದಿರುವ ಸಂಪನ್ಮೂಲ ವ್ಯಕ್ತಿಗಳು ಹಾಗೂ ಹಿರಿಯ ಯತಿಗಳ ಮಾರ್ಗದರ್ಶನದಲ್ಲಿ ಸಾಮಾನ್ಯ ದೈಹಿಕ ವ್ಯಾಯಾಮ, ಧ್ಯಾನ ತರಗತಿಗಳು, ಆಧ್ಯಾತ್ಮಿಕ ಪ್ರವಚನಗಳು, ಜೀವನ ಕೌಶಲ್ಯ ತರಬೇತಿ ಮತ್ತು ಆಪ್ತ ಸಮಾಲೋಚನೆಗಳನ್ನು ನೀಡಲಾಯಿತು. ಇದು ಈ ಶಿಬಿರದ ಅತ್ಯಂತ ಮಹತ್ವದ ಅಂಶ.

ಈ ಶಿಬಿರದಲ್ಲಿ ಪಾಲ್ಗೊಂಡ ತರುಣರಲ್ಲಿ, ಮುಖ್ಯವಾಗಿ ಶ್ರೀರಾಮಕೃಷ್ಣ ವಿವೇಕಾನಂದರ ಬೋಧಪ್ರದ ವಿಚಾರಗಳನ್ನು ತಿಳಿಯಲು ಎಷ್ಟು ಹಂಬಲವಿದೆ ಹಾಗೂ ಅವರಲ್ಲಿ ಸಾಮಾಜಿಕ ಪ್ರಜ್ಞೆ ಎಷ್ಟು ಜಾಗೃತವಾಗಿದೆ ಎಂಬುದನ್ನು ಅರಿಯಲು ಒಂದು ಪರಾಮರ್ಶಕ ಅಧಿವೇಶನವೂ ಇತ್ತು. ಇದರಲ್ಲಿ ಲಿಖಿತ ಪರೀಕ್ಷೆಯ ಜೊತೆಜೊತೆಗೆ ಕೆಲವು ವೈಚಾರಿಕ ಅಂಶಗಳನ್ನು (themes) ಕುರಿತು ಯುವವಿದ್ಯಾರ್ಥಿಗಳೇ ವಿಚಾರ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಅವಕಾಶ ನೀಡಲಾಗಿತ್ತು. ಆ ವಿಷಯಗಳು ಹೀಗಿವೆ:

**೧. ಪ್ರಸಕ್ತ ಆರ್ಥಿಕ ಸಮಸ್ಯೆಗಳಿಗೆ ಸ್ವಾಮಿ ವಿವೇಕಾನಂದರ ಪರಿಹಾರಗಳು.**

**೨. ಸ್ವಾಮಿ ವಿವೇಕಾನಂದರಿಂದ – ಅವರೊಬ್ಬ ವ್ಯಕ್ತಿಯಾಗಿ ಹಾಗೂ ಸಾಧುವಾಗಿ–ನಾನು ಹೇಗೆ ಪ್ರಭಾವಿತನಾಗಿದ್ದೇನೆ ?**

**೩. ಸ್ವಾಮಿ ವಿವೇಕಾನಂದರು ಗುರುಶಿಷ್ಯ ಪರಂಪರೆಯ ಒಂದು ಅಮೂಲ್ಯ ರತ್ನ.**

**೪. ಸ್ವಾಮಿ ವಿವೇಕಾನಂದರು ಒಬ್ಬ ತುಂಟ ಹುಡುಗನಿಂದ 'ಭಾರತದ ಆತ್ಮ' ಎಂದು ಗುರುತಿಸಲ್ಪಡುವಷ್ಟುಮಟ್ಟಿಗೆ ಬೆಳೆದುಬಂದ ದಾರಿ.**

**೫. ೨೧ನೇ ಶತಮಾನಕ್ಕೆ ಸ್ವಾಮಿ ವಿವೇಕಾನಂದರ ಜೀವನದೃಷ್ಟಿಯ ಪ್ರಸ್ತುತತೆ.**

**೬. ಸ್ವಾಮಿ ವಿವೇಕಾನಂದರು ಒಬ್ಬ ವಾಸ್ತವವಾದಿ ತತ್ತ್ವಜ್ಞಾನಿ.**

**೭. ಸ್ವಾಮಿ ವಿವೇಕಾನಂದರು ಓರ್ವ ವೇದಾಂತಿ ಮಾನವತಾವಾದಿ.**

**೮. ದಲಿತ, ದುರ್ಬಲ ಮತ್ತು ದೀನರ ಬಗ್ಗೆ ಸ್ವಾಮಿ ವಿವೇಕಾನಂದರ ಕಳಕಳಿ.**



# ವಿವೇಕ ಯುವಚೇತನ ಶಿಬಿರದ ಪ್ರಾಸ್ತಾವಿಕ ನುಡಿಗಳು

**ಸ್ವಾಮಿ ಮುಕ್ತಿದಾನಂದ**

**ಪೂಜ್ಯ ಸ್ವಾಮೀಜಿಯವರು ಮೈಸೂರಿನ ಶ್ರೀರಾಮಕೃಷ್ಣ ಆಶ್ರಮದ ಅಧ್ಯಕ್ಷರು. ದೇಶದ ಪ್ರತಿಷ್ಠಿತ ಶೈಕ್ಷಣಿಕ ಸಂಸ್ಥೆಯಾದ ಮೈಸೂರಿನ 'ಶ್ರೀರಾಮಕೃಷ್ಣ ವಿದ್ಯಾಶಾಲೆ'ಯಲ್ಲಿ ಎರಡು ದಶಕಗಳಿಗೂ ಹೆಚ್ಚು ಸೇವೆ ಸಲ್ಲಿಸಿರುವ ಸ್ವಾಮೀಜಿಯವರು ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಅಪಾರ ಅನುಭವ ಹೊಂದಿರುವವರು. ಉತ್ತಮ ಭಾಷಣಕಾರರಾಗಿರುವ ಸ್ವಾಮೀಜಿಯವರು ಹಲವು ಲೇಖನಗಳನ್ನು ಮತ್ತು ಪುಸ್ತಕಗಳನ್ನು ಬರೆದಿದ್ದಾರೆ.**

**ಭ**ಗವಾನ್ ಶ್ರೀರಾಮಕೃಷ್ಣ ಹಾಗೂ ಸ್ವಾಮಿ ವಿವೇಕಾನಂದರ ವೈಚಾರಿಕ ಭಾವಧಾರೆಯ ಈ ಒಂದು ಪವಿತ್ರ ವಾತಾವರಣದಲ್ಲಿ ನೀವೆಲ್ಲ ಬಂದು ಸೇರಿರುವುದು ನಮಗೆಲ್ಲರಿಗೂ ಬಹಳ ಸಂತೋಷದ ವಿಷಯ. ನೀವು ಬಂದೊಡನೆಯೇ ಒದಗಿಸಲಾದ ಕೆಲವು ಕಿರುಪುಸ್ತಕಗಳನ್ನು ನೀವೆಲ್ಲ ಓದಲು ತೊಡಗಿದ್ದೀರಿ ಎಂದು ಭಾವಿಸುತ್ತೇನೆ. ಆ ಪುಸ್ತಕಗಳಲ್ಲಿನ ವಿಚಾರಗಳನ್ನು ವಿಶದಪಡಿಸುವಂತಿರುವ ಪೂಜ್ಯ ಸ್ವಾಮೀಜಿಗಳ ಮತ್ತು ಹಿರಿಯರ ಮಾತುಗಳನ್ನು ನೀವು ಇನ್ನು ಮೂರು ದಿನಗಳ ಕಾಲ ಆಲಿಸಲಿದ್ದೀರಿ. ಆಮೂಲಕ ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯದ ಬಗ್ಗೆ ಮತ್ತು ಆ ಸಂಸ್ಕೃತಿಯ ಜೀವದಾಯಕ ವಿಚಾರಗಳು ಹೇಗೆ ಶ್ರೀರಾಮಕೃಷ್ಣ ವಿವೇಕಾನಂದರ ಚಿಂತನೆಗಳಲ್ಲಿ ಪ್ರತಿಧ್ವನಿತವಾಗಿವೆ ಎಂಬುದನ್ನು ನೀವು ಸ್ವಲ್ಪಮಟ್ಟಿಗಾದರೂ ಅರ್ಥ ಮಾಡಿಕೊಳ್ಳುತ್ತೀರಿ ಎಂದು ಆಶಿಸುತ್ತೇನೆ.

ಸ್ವಾಮಿ ವಿವೇಕಾನಂದರು ತಮ್ಮ ಚಿಂತನೆ-ಸಾಧನೆಗಳಿಂದ ಒಂದು ದೊಡ್ಡ ಬಳುವಳಿಯನ್ನು ನಮಗೆಲ್ಲ ಬಿಟ್ಟುಹೋಗಿದ್ದಾರೆ. ಆ ಕೊಡುಗೆಯನ್ನು ಉಳಿಸಿ-ಬೆಳೆಸುವ ಒಂದು ದೊಡ್ಡ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ನೀವೆಲ್ಲರೂ ಈ ಅಪೂರ್ವವಾದ ಸಂಪತ್ತನ್ನು ಕಾಪಾಡಿಕೊಂಡು ನಿಮ್ಮ ಬಾಳನ್ನು ಸಾರ್ಥಕಗೊಳಿಸಿಕೊಳ್ಳುತ್ತೀರಿ ಎಂಬ ವಿಶ್ವಾಸ ನಮ್ಮದು.

ಸ್ವಾಮಿ ವಿವೇಕಾನಂದರು ಭಟ್ಟಿಯಿಳಿಸಿದ ಭಾರತವೇ ಆಗಿದ್ದರು. ಅವರು ಭಾರತದ ಆತ್ಮವೇ ಸರಿ. ಏಕೆಂದರೆ, ವಿವೇಕಾನಂದರನ್ನು ಬಿಟ್ಟು ಭಾರತವಿಲ್ಲ, ಭಾರತವನ್ನು ಬಿಟ್ಟು ವಿವೇಕಾನಂದರಿಲ್ಲ.

ಈ ಶಿಬಿರದ ಉದ್ದೇಶವನ್ನು ಬಹಳ ಸರಳವಾದ ಮಾತುಗಳಲ್ಲಿ ಹೀಗೆ ಹೇಳಬಹುದು: ಇದು ಶ್ರೀರಾಮಕೃಷ್ಣ ವಿವೇಕಾನಂದ ಪರಂಪರೆಯ ಸವಿಯನ್ನು - ಒಂದು ಆಧ್ಯಾತ್ಮಿಕ ವಾತಾವರಣದಲ್ಲಿ ನಿಮಗೆ ನೀಡುವ ಒಂದು ಸಣ್ಣ ಪ್ರಯತ್ನವಷ್ಟೇ.

ಶ್ರೀರಾಮಕೃಷ್ಣ-ವಿವೇಕಾನಂದರ ಕ್ರಾಂತಿಕಾರಕ ವಿಚಾರಗಳು - ಚಿಕಾಗೋ ನಗರದಲ್ಲಿ ೧೨೦ ವರ್ಷಗಳ ಹಿಂದೆ ವಿವೇಕಾನಂದರು ಮಾತನಾಡಿದ ದಿನದಿಂದ - ಇಂದಿನವರೆಗೂ ಜಾಗತಿಕ ಮಟ್ಟದಲ್ಲಿ ಒಂದು ಸಂಚಲನವನ್ನೇ ಉಂಟುಮಾಡಿವೆ. ನಮ್ಮ ಅರಿವಿಗೇ ಬಾರದಂತೆ ಇಡೀ ಪ್ರಪಂಚವನ್ನೇ, ಜನರ ಜೀವನವನ್ನೇ ರಚನಾತ್ಮಕವಾಗಿ ಬದಲಿಸುತ್ತಿವೆ.

ನೀವೆಲ್ಲರೂ ಈ ಆಶ್ರಮದ ಸುತ್ತಮುತ್ತ ಸೂಕ್ಷ್ಮವಾಗಿ ಕಣ್ಣು ಹಾಯಿಸಿದರೆ, ವಿಶೇಷವಾಗಿ ನಿಮಗೆ ಕಂಡುಬರುವುದು ಶ್ರೀರಾಮಕೃಷ್ಣ ವಿವೇಕಾನಂದ ವಿಚಾರಧಾರೆಗೆ ತಮ್ಮನ್ನೇ ಅರ್ಪಿಸಿಕೊಂಡಿರುವ ಸಂನ್ಯಾಸಿವೃಂದ, ಸ್ವಯಂಸೇವಕರು ಹಾಗೂ ಭಕ್ತವೃಂದ. ಇವರೆಲ್ಲರೂ ಸದ್ದುಗದ್ದಲವಿಲ್ಲದೆ ಹೇಗೆ ಮೌನವಾಗಿ ಕಾರ್ಯನಿರತರಾಗಿದ್ದಾರೆ ಎಂಬುದನ್ನು ನೀವು ಕಣ್ಣಾರೆ ಕಾಣಬಹುದು.

ಈ ಆಶ್ರಮದ ಒಂದು ವಿಶೇಷ ಆಕರ್ಷಣೆಯೆಂದರೆ ಇಲ್ಲಿನ ಪುಸ್ತಕ ಮಳಿಗೆ. ಅದ್ಭುತ ವಿಚಾರಗಳನ್ನೊಳಗೊಂಡ ಅನೇಕ ಪುಸ್ತಕಗಳನ್ನು ಈ ಮಳಿಗೆಯಲ್ಲಿ ನೀವು ನೋಡಬಹುದು. ನಿಮ್ಮ ಜೀವನದ ದಿಕ್ಕನ್ನೇ ಬದಲಿಸಬಲ್ಲ ಅನೇಕ ಪುಸ್ತಕಗಳು ಅಲ್ಲಿವೆ. ಅಲ್ಲಿನ ಪುಸ್ತಕಗಳಲ್ಲಿನ ವಿಚಾರಗಳು 'ನಿಮಗೆ ಯಾವುದು ಹಿತ' ಎಂಬುದನ್ನು ಸ್ಪಷ್ಟವಾಗಿ, ನೇರ ನುಡಿಗಳಲ್ಲಿ ತಿಳಿಸಿಕೊಡುತ್ತವೆ. ನಿಜ, ನಿಮ್ಮನ್ನು ಧೃತಿಗೆಡಿಸುವ ಅನೇಕ ಸಂಗತಿಗಳು ಸಮಾಜದಲ್ಲಿ ನಡೆಯುತ್ತಲೇ ಇರುತ್ತವೆ. ಅವು ನಿಮ್ಮ ಮನಸ್ಸನ್ನು ವಿಕ್ಷಿಪ್ತಗೊಳಿಸುತ್ತಿವೆ ಎಂಬುದೂ ನಿಜ. ಆದರೆ ಅದೇ ಸಂದರ್ಭದಲ್ಲಿ ಪ್ರಪಂಚದಲ್ಲಿ ಜ್ಞಾನರಾಶಿಯು ಹೇಗೆ ಭಾರೀಪ್ರಮಾಣದಲ್ಲಿ ವೃದ್ಧಿಯಾಗುತ್ತಿದೆ ಎಂಬುದನ್ನೂ ನೀವು ಗಮನಿಸಬೇಕು. ಮಾಹಿತಿಗಳ ಈ ಮಹಾಪೂರದಲ್ಲಿ ನಾವು ಯಾವುದನ್ನು ಸ್ವೀಕರಿಸಬೇಕು, ಯಾವುದನ್ನು ತಿರಸ್ಕರಿಸಬೇಕು ಎಂಬುದನ್ನು ಅರಿಯಲು ನಮ್ಮ ಮನಸ್ಸು ಸ್ವಸ್ಥವಾಗಿರಬೇಕು. ಜ್ಞಾನದ ಮೂಲಭೂತವಾದ ಅಂಶಗಳು ಯಾವುವು, ಬೆಳೆಯುತ್ತಿರುವ ಈ ಜ್ಞಾನರಾಶಿಯಲ್ಲಿ ನಾವು ಯಾವುದನ್ನು ಸ್ವೀಕರಿಸಬೇಕು ಎಂಬ ವಿವೇಕವನ್ನು ಆಶ್ರಮದ ಪುಸ್ತಕಗಳು ನಿಮಗೆ ನೀಡುತ್ತವೆ. ನೀವೆಲ್ಲ ಆಶ್ರಮದ ಪುಸ್ತಕ ಮಳಿಗೆಗೆ ಭೇಟಿಯಿತ್ತರೆ ಅಂತಹ ಪುಸ್ತಕಗಳನ್ನು ಖಂಡಿತ ಅಲ್ಲಿ ಕಾಣಬಹುದು.

ಈ ಶಿಬಿರದಲ್ಲಿ ವಿಶೇಷವಾಗಿ ನಿಮ್ಮ ಭವಿಷ್ಯ ಜೀವನದಲ್ಲಿ ಗಮನವಿಡಬೇಕಾದ ಮೂಲಭೂತವಾದ ಕೆಲವು ಅಂಶಗಳನ್ನು ಹಿರಿಯ ಸ್ವಾಮಿಗಳು, ಸಂಪನ್ಮೂಲ ವ್ಯಕ್ತಿಗಳು ನಿಮ್ಮ ಮುಂದಿಡಲಿದ್ದಾರೆ. ಅವರೆಲ್ಲರ ವಿಚಾರಗಳು ನಿಮ್ಮ ವ್ಯಕ್ತಿತ್ವ ವಿಕಸನಕ್ಕೆ ಅಗತ್ಯವಾದ ವಿಚಾರ ಪ್ರಚೋದಕ ವಿಷಯಗಳನ್ನು ಒದಗಿಸುತ್ತವೆ.

ನಿಮ್ಮಲ್ಲಿ ಪ್ರತಿಯೊಬ್ಬರಲ್ಲಿಯೂ ಒಂದೊಂದು ವೈಶಿಷ್ಟ್ಯವಿದೆ. ನಿಮ್ಮಲ್ಲಿ ಪ್ರತಿಯೊಬ್ಬರ ಪ್ರತಿಭೆ, ಹಿನ್ನೆಲೆ, ಆಸಕ್ತಿಗಳು ಮತ್ತು ವೈಚಾರಿಕ ದೃಷ್ಟಿಕೋನಗಳು ಬೇರೆಬೇರೆಯಾಗಿರುತ್ತವೆ. ಇವೆಲ್ಲವನ್ನೂ ಒಳಗೊಂಡು, ವೈಚಾರಿಕವಾಗಿ, ಆಧ್ಯಾತ್ಮಿಕವಾಗಿ ನೀವು ಸ್ವತಂತ್ರವಾಗಿ ವಿಚಾರ ಮಾಡುವಂತೆ ಕಲಿಯಲು ಪ್ರೇರೇಪಿಸುವುದೇ ಈ ಶಿಬಿರದ ಉದ್ದೇಶವಾಗಿದೆ.

ಈ ಶಿಬಿರದಲ್ಲಿ ಒಂದು ಪರಾಮರ್ಶೆಯ (Evaluation) ಅಧಿವೇಶನವೂ ಇದೆ. ಈ ಅಧಿವೇಶನವು ನಿಮ್ಮ ಕಾಲೇಜಿನಲ್ಲಿ ನಡೆಯುವಂಥ ಪರೀಕ್ಷೆಯೂ ಅಲ್ಲ ಅಥವಾ ಟೆಸ್ಟ್ ಕೂಡ ಅಲ್ಲ; ಕೇವಲ ನಿಮ್ಮನ್ನು ನೀವೇ ತಿಳಿದುಕೊಳ್ಳುವ, ನಿಮಗನ್ನಿಸಿದ್ದನ್ನು ವ್ಯಕ್ತಪಡಿಸುವ, ನಿಮ್ಮ ಅಭಿಪ್ರಾಯಗಳನ್ನು ಮುಕ್ತವಾಗಿ ತಿಳಿಸುವ ಒಂದು ಅವಕಾಶ ಇದು. ಇದೊಂದು ಮುಖಾಮುಖಿಯಾದ ಆಪ್ತ ಸಂವಾದ. ನೀವು ಇಲ್ಲಿ ಯಾವುದೇ ರೀತಿಯ ಒತ್ತಡಕ್ಕೇ ಆಗಲಿ, ಸಂಕೋಚಕ್ಕೇ ಆಗಲಿ ಒಳಗಾಗದೆ, ಸಮಾಧಾನಚಿತ್ತರಾಗಿ ಇದನ್ನು ಅತ್ಯಂತ ಸುಲಭವೆಂದು ಪರಿಗಣಿಸಿ, ನಿಮ್ಮನ್ನು ನೀವು ಮುಕ್ತವಾಗಿ ವ್ಯಕ್ತಪಡಿಸಬೇಕೆಂದು ಕೇಳಿಕೊಳ್ಳುತ್ತೇನೆ. ಹಾಗೆಯೇ ನಿಮಗೆ ನೀಡಲಾಗುವ ಲಿಖಿತಪರೀಕ್ಷೆಯಲ್ಲಿ ನಿಮ್ಮ ಒಲವು-ನಿಲುವುಗಳನ್ನು, ಅಭಿಪ್ರಾಯಗಳನ್ನು ಯಾವುದೇ ಸಂಕೋಚವಿಲ್ಲದೆ ವ್ಯಕ್ತಪಡಿಸಬೇಕೆಂದು ತಿಳಿಯಪಡಿಸುತ್ತೇನೆ. ಈ ರೀತಿ ಸ್ವತಂತ್ರವಾಗಿ ನಿಮ್ಮನ್ನು ನೀವು ಅಭಿವ್ಯಕ್ತಗೊಳಿಸುವುದರಿಂದ ನಿಮ್ಮ ಆತ್ಮಸ್ಥೈರ್ಯ ಹೆಚ್ಚುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ನಾವು ನಿಮ್ಮ ಬಗ್ಗೆ ತಿಳಿದುಕೊಳ್ಳಬೇಕು;

ನಾವು ನಿಮ್ಮನ್ನು ತಲುಪಬೇಕು, ಆ ಮೂಲಕ ನಿಮ್ಮನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳಬೇಕು ಎಂಬುದೇ ಈ ಮೌಲ್ಯಮಾಪನ ಪ್ರಯೋಗಗಳ ಆಶಯ.

ನಮ್ಮ ಯುವ ವಿದ್ಯಾರ್ಥಿಪೀಳಿಗೆಯ ಸರ್ವತೋಮುಖ ಬೆಳವಣಿಗೆಗೆ ಒಂದು ಶ್ರೇಷ್ಠ ಆದರ್ಶಮಾದರಿ ಅವಶ್ಯವಾಗಿ ಬೇಕಾಗಿದೆ. ಅಂತಹ ವ್ಯಕ್ತಿ ಸ್ವಾಮಿ ವಿವೇಕಾನಂದರು. ಅವರ ಸ್ಫೂರ್ತಿಯುತ ವಿಚಾರಧಾರೆಯನ್ನು ಯುವ ವಿದ್ಯಾರ್ಥಿಜನಾಂಗಕ್ಕೆ ತಿಳಿಸಿಕೊಡಬೇಕು. ಸ್ವಾಮೀಜಿಯ ಬಹುಮುಖ ಪ್ರತಿಭೆ ಹಾಗೂ ಶ್ರೇಷ್ಠ, ಶುದ್ಧ, ಪ್ರಾಮಾಣಿಕ ಹಾಗೂ ಸದಾ ಜನಾನುಕಂಪದಿಂದ ಮಿಡಿಯುತ್ತಿದ್ದ ಹೃದಯವುಳ್ಳ ಅವರ ವ್ಯಕ್ತಿತ್ವವನ್ನು ಪರಿಚಯಿಸಿದರೆ, ಅವರ ಜೀವನ ಉಪದೇಶಗಳಿಂದ ಪ್ರಭಾವಿತರಾದ ಯುವಕರಲ್ಲಿ ಆತ್ಮವಿಶ್ವಾಸದಿಂದ ಕೂಡಿದ ಒಂದು ಕ್ರಿಯಾಶೀಲ ಪರಿಪೂರ್ಣ ವ್ಯಕ್ತಿತ್ವ ವಿಕಾಸವಾಗಲು ಸಹಾಯಕವಾಗುತ್ತದೆ. ಈ ಒಂದು ಭರವಸೆಯೊಂದಿಗೆ ಈ ಯುವಚೇತನ ಶಿಬಿರವನ್ನು ಹಮ್ಮಿಕೊಳ್ಳಲಾಗಿದೆ. ಸ್ವತಃ ಸ್ವಾಮಿ ವಿವೇಕಾನಂದರೇ ಹೀಗೆ ಹೇಳುತ್ತಿದ್ದರು:

"ನಮಗಿಂದು ಬೇಕಾಗಿರುವುದು ಎಲ್ಲವನ್ನೂ ತ್ಯಾಗಮಾಡಿ, ದೇಶದ ಸಲುವಾಗಿ ತಮ್ಮ ಬಾಳನ್ನೇ ಮುಡುಪಾಗಿಡುವ ಯುವಕರು. ಮೊದಲು ನಾವು ಅವರ ಜೀವನವನ್ನು ರೂಪಿಸಬೇಕು, ಅನಂತರ ವಷ್ಟೇ ಅವರಿಂದ ಯಾವುದೇ ರಚನಾತ್ಮಕವಾದ ಕೆಲಸವನ್ನು ನಾವು ನಿರೀಕ್ಷಿಸಬಹುದು."




## ಚೈತನ್ಯದ ಚಿಲುಮೆಯಾಗಿ ಸ್ವಾಮಿ ವಿವೇಕಾನಂದರು ಮತ್ತು ದಿವ್ಯತ್ರಯರು

**ದರ್ಶನ್, ಎಂ.ವಿ.**
ಸರ್ಕಾರಿ ಪ್ರಥಮದರ್ಜೆ ಕಾಲೇಜು,
ಮಾಗಡಿ, ರಾಮನಗರ ಜಿಲ್ಲೆ

**ಸ್ವಾ**ಮಿ ವಿವೇಕಾನಂದರು ನಮ್ಮಲ್ಲಿ ಚೈತನ್ಯದ ಚಿಲುಮೆಯನ್ನು ಮೂಡಿಸಿದ್ದಾರೆ. ತಮ್ಮ ಶಕ್ತಿಯುತ ವ್ಯಕ್ತಿತ್ವದ ಮೂಲಕ, ಪ್ರಭಾವಪೂರ್ಣ ವಾಗ್ಮಿತ್ವದ ಮೂಲಕ ಹಾಗೂ ಪ್ರಚೋದಕ ಬರಹಗಳ ಮೂಲಕ ನಮ್ಮ ರಾಷ್ಟ್ರಚೇತನವನ್ನು ಜಾಗೃತಗೊಳಿಸಿ, ಯುವಕರಲ್ಲಿ ನವೋತ್ಸಾಹವನ್ನು ಕೆರಳಿಸಿ, ಅವರಲ್ಲಿ ನಮ್ಮ ಸಂಸ್ಕೃತಿಯ ಬಗ್ಗೆ ಹೆಮ್ಮೆಯನ್ನು ಕುದುರಿಸಿ, ಸ್ವತಂತ್ರ ನವಭಾರತ ನಿರ್ಮಾಣಕ್ಕೆ ಬುನಾದಿಯನ್ನು ಹಾಕಿದ್ದಾರೆ. ಸ್ವಾಮೀಜಿಯವರ ಕೃತಿಗಳನ್ನು ಓದಿದಾಗ ಇಂದಿಗೂ ಅವರ ಶಕ್ತಿ–ಪ್ರಭಾವಗಳ ಸಂಚಾರ ನಮ್ಮ ನರ–ನಾಡಿಗಳಲ್ಲಿ ಉಂಟಾಗುತ್ತದೆ. ಅಪಾರ ಜ್ಞಾನಸಂಪತ್ತಿನಿಂದ ಕೂಡಿದ ಅವರ ಚಿಂತನೆಗಳು ಪ್ರಜ್ವಲಿಸುತ್ತಿರುವ ಭಾವಾಗ್ನಿಕುಂಡದಿಂದ ಸಿಡಿದುಬಂದ ಕಿಡಿಗಳಂತಿವೆ. ಅವು ನಮ್ಮಲ್ಲಿ ರಾಷ್ಟ್ರಭಕ್ತಿಯ ಕಿಚ್ಚನ್ನು ಹೊತ್ತಿಸುತ್ತವೆ. ಸ್ವಾಮಿ ವಿವೇಕಾನಂದರು ತಮ್ಮ ಭೌತಿಕ ದೇಹದಲ್ಲಿ ಕೇವಲ ೩೯ ವರ್ಷಗಳ ಕಾಲ ಇದ್ದರೂ ಇಂದಿಗೂ ಅವರು ಯುವಕರಿಗೆ ಮಾದರಿಯಾಗಿದ್ದಾರೆ. ಅವರ ಅಪಾರವಾದ ಜ್ಞಾನವನ್ನು ನಾವು ಸಹ ತಿಳಿದುಕೊಳ್ಳಬೇಕಾಗಿದೆ. ವಿಶಾಲ ದೃಷ್ಟಿಕೋನವನ್ನು ಇಟ್ಟುಕೊಂಡು ನಮ್ಮ ಎಲ್ಲ ಭಾವನೆಗಳನ್ನೂ ಸಮಾಜದ ಏಳಿಗೆಗಾಗಿ ಹರಿಯಬಿಡಲು ಅವರ ತತ್ತ್ವಗಳು ನಮ್ಮನ್ನು ಪ್ರೇರೇಪಿಸುತ್ತವೆ. ನಿಜವಾದ ದೇಶಪ್ರೇಮಿಗಿರಬೇಕಾದ ಎಲ್ಲ ಲಕ್ಷಣಗಳೂ ವಿವೇಕಾನಂದರಲ್ಲಿದ್ದವು. ತಾಯಿ ಹೇಗೆ ಮಗುವಿನ ಬಗ್ಗೆ ಚಿಂತಿಸುತ್ತಾಳೋ, ಹಾಗೆಯೇ ನಾವು ನಮ್ಮ ರಾಷ್ಟ್ರದ ಬಗ್ಗೆ ಚಿಂತಿಸಬೇಕು. ಇದಕ್ಕೆ ನಮ್ಮ ಆದರ್ಶವಾಗಿರುವವರು ಸ್ವಾಮಿ ವಿವೇಕಾನಂದರೊಬ್ಬರೇ.

**ರಂಜಿತ್ ಆರ್.**
ಕಾರ್ಕಳ.

**ಯು**ವಕರನ್ನು ಕುರಿತು, "ಏಳಿ, ಎದ್ದೇಳಿ, ಗುರಿ ಮುಟ್ಟುವ ತನಕ ನಿಲ್ಲದಿರಿ" ಎಂಬ ಸಿಂಹಘರ್ಜನೆಯನ್ನು ಮಾಡಿದ ಭಾರತ ದೇಶದ ಏಕೈಕ ಅಧ್ಯಾತ್ಮ ಪುರುಷ ಸ್ವಾಮಿ ವಿವೇಕಾನಂದರು. ಮಲಗಿ ನಿದ್ರಿಸುತ್ತಿದ್ದ ಭಾರತೀಯ ಜನತೆಗೆ, ಅನ್ಯರಿಂದ ಆಗುತ್ತಿರುವ ಅನ್ಯಾಯವನ್ನು ಸದೆಬಡಿದು ಎದ್ದುನಿಲ್ಲಲು ಅವರು ಆಮೂಲಕ ಹುರಿದುಂಬಿಸಿದರು. ಭಾರತದ ಯುವಜನತೆಗೆ ವಿವೇಕಾನಂದರು ಹಲವಾರು ಆದರ್ಶಯುತವಾದ ಸಂದೇಶಗಳನ್ನು ನೀಡಿದ್ದಾರೆ. ನವಭಾರತದ ನಿರ್ಮಾಣ ಕೇವಲ ಯುವಕರಿಂದ ಮಾತ್ರ ಸಾಧ್ಯ ಎಂದರಿತ ವಿವೇಕಾನಂದರು ಯುವಜನತೆಯನ್ನು ಬಡಿದೆಬ್ಬಿಸಿದರು. ಯುವಜನತೆಯೇ ಈ ದೇಶದ ಆದರ್ಶಬಿಂದು; ಅವರು ಮನಸ್ಸು ಮಾಡಿದರೆ ಇಡೀ ಜಗತ್ತನ್ನೇ ಬದಲಾಯಿಸಬಹುದು ಎಂಬ ನಂಬಿಕೆಯನ್ನು ಇಟ್ಟವರು ವಿವೇಕಾನಂದರು. ಅವರ ಬಗ್ಗೆ ಕೇವಲ ಮಾತನಾಡಿದರೆ, ಭಾಷಣಗಳನ್ನು ಆಲಿಸಿದರೆ ಅದರಿಂದ ಏನೂ ಪ್ರಯೋಜನವಿಲ್ಲ. ಅದನ್ನು ಕಾರ್ಯರೂಪಕ್ಕೆ ತರಬೇಕು. ಆಗಮಾತ್ರ ವಿವೇಕಾನಂದರ ಕನಸನ್ನು ನನಸು ಮಾಡಲು ಸಾಧ್ಯ... ವಿವೇಕಾನಂದರ ಜೀವನ ಸಂದೇಶಗಳನ್ನು ಓದಿದಾಗ, ತಿಳಿದಾಗ ನನ್ನ ಮೈಯ ನರನಾಡಿಗಳು ಸ್ಫುಟಗೊಂಡವು. ಸ್ವಾಮೀಜಿಯವರು ಭಾರತವನ್ನು ಕಂಡದ್ದು ಮಾತೃಭೂಮಿಯಾಗಿ. ನಾವು ಯಾವ ದೇಶದಲ್ಲೇ ಇರಲಿ, ನಮಗೆ ನಮ್ಮ ಜನ್ಮಭೂಮಿಯು ಅತ್ಯಂತ ಪರಮಪಾವನ. ಹಲವಾರು ಕಟ್ಟುಪಾಡುಗಳ, ಭಾಷೆಗಳ, ಜನಾಂಗಗಳ ಮತ್ತು ಧರ್ಮಗಳ ತವರುಮನೆ ಭರತಖಂಡ. ಈ ಆದರ್ಶಯುತವಾದ ಭರತಖಂಡದ ಮಾಹಾತ್ಮೆಯನ್ನು ಜಗತ್ತಿಗೆಲ್ಲ ಸಾರಿದ ಏಕೈಕ ವ್ಯಕ್ತಿ ಸ್ವಾಮಿ ವಿವೇಕಾನಂದರು. ಧರ್ಮದ ಅನುಷ್ಠಾನ, ಸರ್ವರಿಗೂ ಶಿಕ್ಷಣ, ವೈದ್ಯಕೀಯ ಸೇವೆ – ಹೀಗೆ ಹಲವಾರು ಅಂಶಗಳನ್ನು ಕುರಿತು ಮೊಟ್ಟಮೊದಲು ಆಲೋಚಿಸಿದವರು ಸ್ವಾಮಿ ವಿವೇಕಾನಂದರು. "ಧರ್ಮದ ರಹಸ್ಯವಿರುವುದು ಸಿದ್ಧಾಂತಗಳಲ್ಲಲ್ಲ, ಅದರ ಅನುಷ್ಠಾನದಲ್ಲಿ. ಒಳ್ಳೆಯವರಾಗಿರುವುದು, ಒಳ್ಳೆಯದನ್ನು ಮಾಡುವುದು – ಇದೇ ಧರ್ಮದ ಸರ್ವಸ್ವ" ಎಂದವರು ವಿವೇಕಾನಂದರು. ಶ್ರೀರಾಮಕೃಷ್ಣರ ಆದರ್ಶ ಮೌಲ್ಯಗಳನ್ನು ಸಾರಲು ವಿವೇಕಾನಂದರು ಹುಟ್ಟುಹಾಕಿದ ಸಂಸ್ಥೆ ರಾಮಕೃಷ್ಣ ಮಿಷನ್. ಇದು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. **ತ್ಯಾಗ ಮತ್ತು ಸೇವೆ** ಇದರ ಪ್ರಮುಖ ಧ್ಯೇಯಗಳು. ಅಧ್ಯಾತ್ಮ ಶಿಕ್ಷಣವನ್ನು ಸರ್ವರಿಗೂ ಒದಗಿಸುವುದು, ಸ್ವಾಮೀಜಿಯವರ ಜೀವದಾಯಿನಿ ಮೌಲ್ಯಗಳನ್ನು ಶಿಕ್ಷಣದಲ್ಲಿ ಅಳವಡಿಸುವುದು – ಹೀಗೆ ಹಲವಾರು ಉದ್ದೇಶಗಳನ್ನು ಇದು ಹೊಂದಿದೆ. ರಾಮಕೃಷ್ಣ ಮಹಾಸಂಘದ ಶಾಖೆಗಳು ದೇಶವಿದೇಶಗಳಲ್ಲಿ ಸ್ಥಾಪಿತವಾಗಿದ್ದು, ದೇಶದ ಸರ್ವರ ಅಭಿವೃದ್ಧಿಗೆ ಪ್ರಯತ್ನಿಸುತ್ತಿವೆ. ಹಾಗೆಯೇ ಶ್ರೀರಾಮಕೃಷ್ಣ, ಸ್ವಾಮಿ ವಿವೇಕಾನಂದ ಮತ್ತು ಶ್ರೀಶಾರದಾಮಾತೆಯವರ ಸಂದೇಶಗಳನ್ನು ವಿಶ್ವದೆಲ್ಲೆಡೆ ಪಸರಿಸುತ್ತಿವೆ.

### ಮಣಿಮಹೇಶದ ಮಹಿಮೆ

ಹಿಮಾಲಯದ ಪೀರ್ ಪಾಂಜಾಲ್ ಶಿಖರ ಶ್ರೇಣಿಗೆ ಸೇರುತ್ತದೆ ಈ ಮಣಿಮಹೇಶ. ಇದು ಸಮುದ್ರಮಟ್ಟಕ್ಕಿಂತ ೧೩,೩೯೦ ಅಡಿಗಳ ಎತ್ತರದಲ್ಲಿದೆ. ಪಾರ್ವತಿಯನ್ನು ವಿವಾಹವಾದ ನಂತರ ಶಿವನು ಈ ಮಣಿಮಹೇಶವನ್ನು ನಿರ್ಮಿಸಿದನೆಂಬುದಾಗಿ ವದಂತಿ. ಇಲ್ಲಿರುವ ಮಣಿಮಹೇಶ ಸರೋವರದ ತೀರದಲ್ಲಿ ಶಿವನು ತಪಸ್ಸು ಮಾಡಿದ್ದನೆಂಬುದಾಗಿ ಸ್ಥಳೀಯ 'ಗಡ್ಡಿ' ಜನರು ಹೇಳುವರು. ಶಿವನೇ ಆ ಜನಾಂಗದವರು ಧರಿಸುವ **'ಚುಹಾಲಿ'** ಟೊಪ್ಪಿಯನ್ನೂ, **'ಚೋಲಾ'** (ಒಂದು ಬಗೆಯ ಕೋಟು) ಮತ್ತು **'ಡೋರಾ'** (೧೦–೧೫ ಸೆ.ಮೀ ಉದ್ದದ ಹಗ್ಗ) ಸಾಂಪ್ರದಾಯಿಕ ಉಡುಗೆಗಳನ್ನೂ ಅವರಿಗೆ ನೀಡಿದನೆಂಬುದಾಗಿ ಸ್ಥಳೀಯರ ನಂಬುಗೆ. ಗಡ್ಡಿ ಜನಾಂಗದವರು ಈ ಸ್ಥಳವನ್ನು ಶಿವಭೂಮಿಯೆಂದೂ, ತಮ್ಮನ್ನು ಶಿವಭಕ್ತರೆಂದೂ ಕರೆದುಕೊಳ್ಳುವರು.

ಸಾಂಪ್ರದಾಯಿಕವಾಗಿ ಐದು ಕೈಲಾಸಗಳಿವೆ ಎಂಬ ನಂಬಿಕೆ ಇದೆ. ಅವುಗಳಲ್ಲಿ ಮಣಿಮಹೇಶವೂ ಒಂದು. ಚೀನಾಕ್ಕೆ ಸೇರಿದ ಟಿಬೆಟ್‌ದಲ್ಲಿರುವುದು ಒಂದು **ಕೈಲಾಸ**. ಭಾರತ–ಟಿಬೆಟ್‌ಗಳ ಗಡಿಯಿರುವುದು **ಛೋಟಾ ಕೈಲಾಸ** ಅಥವಾ **ಆದಿಕೈಲಾಸ**. ಅದನ್ನೇ 'ಓಂ ಪರ್ವತ'ವೆಂದೂ ಕರೆಯುವರು. ಹಿಮಾಚಲದ ಕಿನ್ನರ್ ಜಿಲ್ಲೆಯಲ್ಲಿರುವ **ಕಿನ್ನರ ಕೈಲಾಸ** ಮೂರನೆಯದು. ಹಿಮಾಚಲ ಪ್ರದೇಶದ ಕುಲ್ಲು ಜಿಲ್ಲೆಯಲ್ಲಿರುವುದು **ಶ್ರೀಖಂಡ ಕೈಲಾಸ** ನಾಲ್ಕನೆಯದ್ದು. **ಮಣಿಮಹೇಶ** ಐದನೆಯದ್ದು. ಶಿವನು ಆರು ತಿಂಗಳು ಈ ಕೈಲಾಸದಲ್ಲಿದ್ದು, ನಂತರ ಆರು ತಿಂಗಳು ಈ ಪ್ರದೇಶದ ಉಸ್ತುವಾರಿಯನ್ನು ಕೃಷ್ಣಜನ್ಮಾಷ್ಟಮಿಯಂದು ವಿಷ್ಣುವಿಗೆ ವಹಿಸಿ, ತಾನು ಪಾತಾಳದಲ್ಲಿರುತ್ತಾನಂತೆ. ಪುನಃ ಫೆಬ್ರುವರಿಯ ಕೊನೆಯಲ್ಲಿ ತನ್ನ ವಿವಾಹದ ಹಿಂದಿನ ರಾತ್ರಿ ಭರ್‌ಮೌರಿಗೆ ಹಿಂತಿರುಗುತ್ತಾನಂತೆ. ಹೀಗಿದೆ ಸ್ಥಳೀಯರ ಪ್ರತೀತಿ. ಈ ಸ್ಥಳವನ್ನು ನಾಥ ಸಂಪ್ರದಾಯದ ಮಹಾನ್ ಸಂತನಾದ ಛರ್‌ಪಟ್‌ನಾಥನು ಹುಡುಕಿದನೆಂದೂ ಹೇಳುವರು. ಇಲ್ಲಿ ಮಣಿಮಹೇಶನ ದರ್ಶನ ಮಾಡಿ ಕೊಳದಲ್ಲಿ ಸ್ನಾನ ಮಾಡಲು ಲಕ್ಷಾಂತರ ಯಾತ್ರಿಗಳು ಕೃಷ್ಣಾಷ್ಟಮಿಯಿಂದ ರಾಧಾಷ್ಟಮಿಯವರೆಗೆ ಬರುವರು. ಈ ವರ್ಷದಿಂದ, ಯಾತ್ರೆಗೆ ಹೋಗಬಯಸುವವರು ತಮ್ಮ ಹೆಸರನ್ನು ಮುಂಚೆಯೇ ನೋಂದಣಿ ಮಾಡಿಸಬೇಕು. ಈ ಯಾತ್ರೆ ಸಾಂಪ್ರದಾಯಿಕವಾಗಿ ಚಂಬಾದಲ್ಲಿರುವ ಲಕ್ಷ್ಮೀನಾರಾಯಣ ದೇವಾಲಯ ಮತ್ತು ದಶನಾಮಿ ಅಖಾಡಾದಿಂದ ಪ್ರಾರಂಭವಾಗುತ್ತದೆ. ಛರ್‌ಪಟ್‌ನಾಥರ ಪವಿತ್ರ ದಂಡವನ್ನು (ಛಡೀ) ಹಿಡಿದ ಸಾಧುಗಳ ಹಾಗೂ ಭಕ್ತರ ಸಮೂಹ ಆರು ದಿನಗಳಲ್ಲಿ ಮಣಿಮಹೇಶವನ್ನು ನಡೆದು ಸೇರುತ್ತದೆ. ಮಣಿಮಹೇಶಕ್ಕೆ ತಲುಪಿದಾಗ ಇಡೀ ರಾತ್ರಿ ಅಲ್ಲಿ ಪೂಜೆಗಳನ್ನು ನೆರವೇರಿಸಿ, ಮಾರನೇ ದಿವಸ ಪವಿತ್ರ ಕೊಳದಲ್ಲಿ ಮುಳುಗುಹಾಕುತ್ತಾರೆ. ಪುರುಷಭಕ್ತರು ಶಿವಕರೋತ್ರಿಯಲ್ಲಿ ಮುಳುಗು ಹಾಕಿದರೆ, ಸ್ತ್ರೀಭಕ್ತರು ಗೌರಿಕುಂಡದಲ್ಲಿ ಮುಳುಗುಹಾಕುವರು. ಇದು ಹಿಮಾಚಲ ರಾಜ್ಯದ ಪ್ರತಿಷ್ಠಿತ ಜಾತ್ರೆಯಾದ್ದರಿಂದ ಸರ್ಕಾರದ ವತಿಯಿಂದ ಅನೇಕ ಸವಲತ್ತುಗಳನ್ನು ಆ ಸಮಯದಲ್ಲಿ ಒದಗಿಸಿ ಕೊಡುತ್ತಾರೆ. ದಾರಿಯುದ್ದಕ್ಕೂ ವಿಶ್ರಾಮತಾಣಗಳಿದ್ದು, ಭಕ್ತರಿಗೆ ಉಚಿತ ಆಹಾರವನ್ನು ನೀಡಲು ಪೈಪೋಟಿ ನಡೆಯುತ್ತದೆ! ಆ ಸಮಯದಲ್ಲಿ ಹಿಮವೆಲ್ಲ ಕರಗಿರುವುದರಿಂದ ಅದರ ಮೇಲೆ ನಡೆದು ಕೊಂಡು ಹೋಗಬೇಕಾಗಿರುವುದಿಲ್ಲ.


ವೇಗವಾಗಿ ಹರಿದುಬರುತ್ತಿರುವ
ಮಣಿಮಹೇಶ ಸರೋವರದ ನೀರು

### ಧಾಂಚೋ ಮತ್ತು ಮಣಿಮಹೇಶ

ಮಧ್ಯಾಹ್ನ ಸುಮಾರು ೧.೩೦ಕ್ಕೆ ಹಡ್‌ಸರ್‌ನಿಂದ ನಮ್ಮ ಕಾಲ್ನಡಿಗೆಯನ್ನು ಶುರು ಮಾಡಿದೆವು. ಹಡ್‌ಸರ್‌ನಿಂದ ಧಾಂಚೋ ವಿಗೆ ೭ ಕಿ.ಮೀ ದೂರ. ಧಾಂಚೋವಿನಿಂದ ಮಣಿಮಹೇಶಕ್ಕೆ ೭.೫೦ ಕಿ.ಮೀ ದೂರ. ಬೆಟ್ಟದ ತಪ್ಪಲನ್ನು ಕೆರೆದು ಮಾಡಿದ ಎರಡಡಿಯ ರಸ್ತೆ ಅದು. ನಮ್ಮ ಬಲಕ್ಕೆ ಅತಿ ಎತ್ತರವಾದ ದೇವದಾರು ವೃಕ್ಷಗಳಿಂದ ಕೂಡಿದ ಬೆಟ್ಟವಾದರೆ, ಎಡಗಡೆಗೆ ಮಣಿಮಹೇಶದಿಂದ ವೇಗವಾಗಿ, ಆದರೆ ಸುಂದರವಾಗಿ ಹರಿದುಬರುತ್ತಿದ್ದ ಮಣಿಮಹೇಶ ಸರೋವರದ ನೀರು. ನಾನು ಹೋಗುತ್ತಿದ್ದುದು ಯಾತ್ರೆಯ ಸಮಯವಲ್ಲದ್ದರಿಂದ ರಸ್ತೆ ಇನ್ನೂ ತಯಾರಾಗಿರಲಿಲ್ಲ. ಅಲ್ಲಲ್ಲಿ ಬೆಟ್ಟ ಕುಸಿದು ಬಿದ್ದಿದ್ದರಿಂದ ಸರಿ ದಾಡುವ ಕಲ್ಲುಗಳ ಮೇಲೆಯೇ ನಡೆದುಕೊಂಡು ಹೋದೆ. ಅಲ್ಲೊಂದು ಜಾಗದಲ್ಲಿ ನಮ್ಮ ಮಾರ್ಗದರ್ಶಿ ಒಂದು ಪೊದೆಯನ್ನು ತೋರಿಸಿ, ಅದೊಂದು ಮದ್ದಿನ ಗಿಡವೆಂದನು. ತುರಿಕೆ ಸೊಪ್ಪಿಗೆ ಇದು ಮದ್ದೆಂದೂ, ಅದರ ಪಕ್ಕದಲ್ಲೇ ಎಲ್ಲೋ ತುರಿಕೆ ಸೊಪ್ಪೂ ಇರುತ್ತದೆಂದೂ ವಿವರಿಸಿದಾಗ, 'ಪ್ರಕೃತಿಯ ಪ್ರತೀಕಾರ' ಚಮತ್ಕಾರಕ್ಕೆ ಮನಸೋತೆ. ಇದೇ ರೀತಿ ಅವನಿಗೆ ತಿಳಿದಿರುವ ಕೆಲವು ಔಷಧ ಗುಣಗಳನ್ನೂ ವಿವರಿಸುತ್ತಿದ್ದ. ನಾನೂ ಅವನಿಗೆ ನನಗೆ ತಿಳಿದ ಪುರಾಣಗಳಿಂದ ಜೀವನಮೌಲ್ಯಗಳನ್ನು ಹೇಳುತ್ತಿದ್ದೆ. ಹೀಗೆಯೇ ನಿಧಾನವಾಗಿ ಧಾಂಚೋ ಎಂಬಲ್ಲಿಗೆ ಬಂದೆವು. ಅದು ನಮ್ಮ ಆ ದಿನದ ವಿಶ್ರಾಮತಾಣ. (ಮುಂದುವರೆಯುವವಿಶ್ವಾಸ



# ಶ್ರೀಮದ್ಭಾಗವತ ಸಾರ

ಎ. ಮುರಳೀಧರ

### ಆರನೆಯ ಸ್ಕಂಧ

**ಅಜಾಮಿಳ:** ಬ್ರಾಹ್ಮಣ ದಂಪತಿಗಳಿಗೆ ಪುತ್ರನಾಗಿ ಜನಿಸಿದ ಅಜಾಮಿಳನು, ಆ ಕುಟುಂಬದ ಪರಂಪರೆಯಂತೆ ಧರ್ಮಿಷ್ಠನಾಗಿ ಸಕಲ ವಿದ್ಯಾಪಾರಂಗತನಾಗಿದ್ದನು. ವಿದ್ಯೆಗೆ ವಿನಯವೇ ಭೂಷಣವೆಂಬಂತೆ ಗುರುಹಿರಿಯರಲ್ಲಿ ಯಾವಾಗಲೂ ಆದರದಿಂದ ಇದ್ದನು. ದ್ವೇಷಾಸೂಯೆಗಳು ತನ್ನ ಹತ್ತಿರವೂ ಸುಳಿಯದಂತೆ ಎಚ್ಚರವಹಿಸಿದ್ದನು.

ಒಂದು ದಿನ ಅಜಾಮಿಳನು ತಂದೆಯ ಹೋಮಹವನಗಳಿಗಾಗಿ ದರ್ಭೆ, ಸಮಿತ್ತು, ಹೂವು, ತುಳಸಿಗಳನ್ನು ತರಲು ಅಡವಿಗೆ ಹೋದನು. ಅವುಗಳನ್ನು ಸಂಗ್ರಹಿಸಿ ಹಿಂತಿರುಗುತ್ತಿದ್ದಾಗ ಅಡವಿಯಲ್ಲಿ ವಾಸವಿದ್ದ ದಂಪತಿಯರು ಅಶ್ಲೀಲವಾಗಿ ಹಗಲುಹೊತ್ತಿನಲ್ಲಿ ಸರಸವಾಡುತ್ತಿದ್ದುದನ್ನು ಕಂಡನು. ತರುಣನಾದ ಅಜಾಮಿಳನು ಇಂತಹ ಉನ್ಮತ್ತ ಸ್ಥಿತಿಯಲ್ಲಿದ್ದ ಸ್ತ್ರೀಯನ್ನು ನೋಡಿರಲೇ ಇಲ್ಲ. ಆಕೆಯ ಅಂಗಾಂಗಗಳನ್ನು ನೋಡಿದಮೇಲಂತೂ, ಬ್ರಹ್ಮಚಾರಿಯಾಗಿದ್ದ ಆತನ ಮನಸ್ಸು ಲಂಗುಲಗಾಮಿಲ್ಲದೆ ಹಿಡಿತ ತಪ್ಪಿತು. ಅವಳಿಗೆ ಸಂಪೂರ್ಣವಾಗಿ ಮನಸೋತನು.

ಮನೆಗೆ ಹಿಂತಿರುಗಿದ ಅಜಾಮಿಳನ ಮನಸ್ಸಿನಲ್ಲಿ ಆ ಹೆಣ್ಣಿನ ರೂಪವೇ ತುಂಬಿತ್ತು. ಗುರುಗಳ ಉಪದೇಶವನ್ನು ನೆನಪುಮಾಡಿಕೊಂಡನಾದರೂ, ಆತನ ಮನಸ್ಸು ಆಕೆಯ ಮೋಹಪಾಶದಿಂದ ಹೊರಬರಲೇ ಇಲ್ಲ. ಹಗಲಿರುಳೂ ಅವಳ ನೆನಪಲ್ಲೇ ಇರುತ್ತಿದ್ದನು. ನಿತ್ಯಕರ್ಮಗಳಾದ ಸ್ನಾನ, ಸಂಧ್ಯಾವಂದನೆ, ಜಪ-ತಪ – ಎಲ್ಲವನ್ನೂ ಬಿಟ್ಟುಬಿಟ್ಟನು. ಯಾರಿಗೂ ಹೇಳದೇ ಅರಣ್ಯಕ್ಕೆ ಹಿಂತಿರುಗಿ ಅವಳಲ್ಲಿ ಪ್ರೇಮಭಿಕ್ಷೆ ಬೇಡಿದನು. ಯುವಕ ಬ್ರಾಹ್ಮಣನ ಮಾತಿನ ಮೋಡಿಗೆ ಒಲಿದು ಆಕೆಯು ಅವನೊಂದಿಗೆ ಸಂಸಾರ ಹೂಡಿದಳು. ಕಾಲಕ್ರಮೇಣ ತಂದೆಯ ಆಸ್ತಿಯೆಲ್ಲವೂ ಕರಗಿತು. ಉದರ ಪೋಷಣೆಗಾಗಿ ವ್ಯಾಪಾರದಲ್ಲಿ ತೊಡಗಿದನಾದರೂ ನಷ್ಟವುಂಟಾಗಿ ಕಂಗಾಲಾದನು. ಮುಂದೆ, ಸಂಸಾರ ನಿರ್ವಹಿಸಲು ಕಳ್ಳತನ, ಜೂಜಾಡುವುದು ಇತ್ಯಾದಿ ಅನೈತಿಕ ಕಾರ್ಯಗಳಲ್ಲಿ ತೊಡಗಿಕೊಂಡನು. ಆ ಮಹಿಳೆಯಿಂದ ಹತ್ತು ಮಂದಿ ಮಕ್ಕಳನ್ನು ಪಡೆದನು. ವಾತ್ಸಲ್ಯದಿಂದ ತನ್ನ ಕೊನೆಯ ಮಗನಿಗೆ 'ನಾರಾಯಣ' ಎಂದು ಹೆಸರಿಟ್ಟನು.

ಕಾಲಚಕ್ರ ಉರುಳಿದಂತೆ, ಅಜಾಮಿಳನಿಗೂ ಮುಪ್ಪು ಸಮೀಪಿಸಿ ದೇಹವು ಜರ್ಝರಗೊಂಡಿತು. ಅನೇಕ ವ್ಯಾಧಿಗಳು ಬಂದವು. ತನ್ನ ಕೊನೆಯ ಪುತ್ರನ ಮೇಲಿನ ವ್ಯಾಮೋಹದಿಂದಾಗಿ ಯಾವಾಗಲೂ ಸಣ್ಣ-ಪುಟ್ಟ ಕಾರ್ಯಗಳಿಗೆಲ್ಲ, 'ನಾರಾಯಣ, ನಾರಾಯಣ' ಎನ್ನುತ್ತ ಆತನನ್ನೇ ಆಶ್ರಯಿಸತೊಡಗಿದನು. ಎಲ್ಲಿ ಹೋದರೂ ಆತನನ್ನು ತನ್ನ ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಿದ್ದನು.

ಹೀಗೊಂದು ದಿನ, ಭಯಂಕರ ವೇಷದ ಯಮದೂತರು ಅಜಾಮಿಳನ ಕೊರಳಿಗೆ ಯಮಪಾಶ ಹಾಕಲು ಬಂದರು. ಅವರನ್ನು ಕಂಡು ಭಯದಿಂದ ತನ್ನ ಮಗನನ್ನು ಕುರಿತು, 'ನಾರಾಯಣ, ನಾರಾಯಣ' ಎಂದು ಕೂಗಿದನು. ಅಷ್ಟರಲ್ಲಿ ವಿಷ್ಣುದೂತರು ಬಂದು, "ನೀವು ಅಜಾಮಿಳನನ್ನು ಕರೆದೊಯ್ಯುವಂತಿಲ್ಲ. ಆತನು ಕಡೆಯ ಗಳಿಗೆಯಲ್ಲಿ ಭಗವಂತನನ್ನು ಸ್ಮರಿಸಿದ್ದರಿಂದ, ವೈಕುಂಠಲೋಕಕ್ಕೆ ಅರ್ಹನಾಗಿದ್ದಾನೆ" ಎಂದರು. ವಿಷ್ಣುದೂತರ ಮಾತಿಗೆ ಬೆಲೆಕೊಟ್ಟ ಯಮದೂತರು ಅಜಾಮಿಳನನ್ನು ಬಿಟ್ಟುಬಿಟ್ಟರು.

ಈ ಸಂವಾದವನ್ನು ಕೇಳಿ ಅಜಾಮಿಳನಿಗೆ, 'ತಾನು ಹೇಗಿದ್ದೆನು, ಈಗ ಹೇಗಾಗಿದ್ದೇನೆ' ಎನ್ನುವುದರ ಅರಿವಾಗಿ ತನ್ನ ಜೀವನದ ಬಗ್ಗೆಯೇ ಜುಗುಪ್ಸೆ ಮೂಡಿತು. ಭಗವಂತನ ನಾಮಸ್ಮರಣೆಯೊಂದೇ ತನ್ನನ್ನು ಉದ್ಧರಿಸಬಲ್ಲುದು ಎಂದು ಅವನು ತೀರ್ಮಾನಿಸಿ, ಗಂಗಾನದಿಯ ತೀರಕ್ಕೆ ಬಂದನು. ಅಲ್ಲಿ ಸಜ್ಜನರ ಸಹವಾಸದಿಂದ ವೈರಾಗ್ಯ ತಾಳಿದನು. ಭಕ್ತಿಯೋಗವನ್ನು ಅಭ್ಯಾಸ ಮಾಡಿದನು. ತನ್ನ ಮನಸ್ಸು ಮತ್ತು ಇಂದ್ರಿಯಗಳನ್ನು

ನಿಗ್ರಹಿಸಿದನು. ಶ್ರೀಮನ್ನಾರಾಯಣನನ್ನೇ ಧ್ಯಾನಿಸುತ್ತ ಮುಕ್ತಿಯನ್ನು ಹೊಂದಿ ವಿಷ್ಣುಸಾನ್ನಿಧ್ಯವನ್ನು ಪಡೆದನು.

**ವೃತ್ರಾಸುರನ ವಧೆ:** ದೇವೇಂದ್ರನು ದೈತ್ಯರ ಆಕ್ರಮಣದ ಭಯವಿಲ್ಲದೆ ನಿರಾತಂಕನಾಗಿ, ವೈಭವದಿಂದ ಅಮರಾವತಿಯನ್ನು ಆಳುತ್ತಿದ್ದನು. ಒಮ್ಮೆ ತನ್ನ ಸಮಾನರಾರೂ ಇಲ್ಲವೆಂಬ ಅಹಂಕಾರ ಅವನಿಗೆ ಬಂದಿತು. ಒಂದು ದಿನ ರಾಜಸಭೆಯಲ್ಲಿ ಅಧಿಕಾರದ ಅಮಲಿನಲ್ಲಿ ಸಿಂಹಾಸನದ ಮೇಲೆ ಕುಳಿತಿದ್ದನು. ಆ ರಾಜಸಭೆಯಲ್ಲಿ ಸಪ್ತಋಷಿಗಳು, ಅಶ್ವಿನಿ ದೇವತೆಗಳು, ಅಷ್ಟವಸುಗಳು ಮುಂತಾದ ಪ್ರಮುಖರು ಇದ್ದರು. ಭಟರು ಇಂದ್ರನನ್ನು ಹಾಡಿ ಹೊಗಳುತ್ತಿದ್ದರು. ಇದರಿಂದಾಗಿ ದೇವೇಂದ್ರನ ಅಹಂಕಾರ ಮತ್ತಷ್ಟು ಹೆಚ್ಚಾಯಿತು. ಆ ಸಂದರ್ಭದಲ್ಲಿ ದೇವತೆಗಳ ಗುರುಗಳಾದ ಬೃಹಸ್ಪತ್ಯಾಚಾರ್ಯರು ಸಭಾಗೃಹವನ್ನು ಪ್ರವೇಶಿಸಿದರು. ಅಹಂಕಾರದ ಮದದಿಂದ ಇಂದ್ರನು ಗುರುಗಳಿಗೆ ಸರಿಯಾದ ಸತ್ಕಾರ ನೀಡಲಿಲ್ಲ ಮತ್ತು ಗೌರವದಿಂದ ಕಾಣಲಿಲ್ಲ. ಇದರಿಂದ ಬೃಹಸ್ಪತ್ಯಾಚಾರ್ಯರು ಬಹಳವಾಗಿ ನೊಂದುಕೊಂಡರು. ಅಪಮಾನಗೊಂಡು, ಮೌನವಾಗಿ ಹಿಂತಿರುಗಿದರು.

ಗುರುಗಳ ನಿರ್ಗಮನದಿಂದ ಇಂದ್ರನಿಗೆ ಬಹಳ ಕಸಿವಿಸಿಯಾಯಿತು. ತನ್ನಿಂದಾದ ಪ್ರಮಾದದ ಅರಿವಾಯಿತು. ದೇವಗುರುಗಳನ್ನು ಆದರಿಸಿ ಸತ್ಕರಿಸದೆ ಅವಮಾನ ಮಾಡಿದ್ದು ದೊಡ್ಡ ಅಪರಾಧವಾಯಿತೆಂದು ತಿಳಿದನು. ಮುಂದೆ ಏನಾಗುವುದೋ ಎಂದು ಹೆದರಿ, ಗಡಗಡ ನಡುಗಿದನು. ತಕ್ಷಣ ದೇವಗುರುಗಳನ್ನು ಕಾಣಲು ಅವರ ಆಶ್ರಮಕ್ಕೆ ಬಂದನು. ಇಂದ್ರನು ಬರುತ್ತಿರುವ ವಿಷಯ ತಿಳಿದ ಗುರುಗಳು ಅಲ್ಲಿಂದ ಅದೃಶ್ಯರಾದರು. ಆಶ್ರಮದಲ್ಲಿ ಗುರುಗಳನ್ನು ಹುಡುಕಿದ ಇಂದ್ರನು ಅವರನ್ನು ಕಾಣದೆ ಹತಾಶನಾಗಿ ಹಿಂತಿರುಗಿದನು.

ದೇವಗುರುಗಳ ಅವಕೃಪೆಗೆ ಒಳಗಾಗಿದ್ದ ದೇವೇಂದ್ರನು ದೈಹಿಕವಾಗಿ, ಮಾನಸಿಕವಾಗಿ ಕುಗ್ಗಿ ಹೋದನು. ಇದರ ಸುಳಿವು ತಿಳಿದ ದೈತ್ಯರು ಇದೇ ಸರಿಯಾದ ಸಮಯವೆಂದು ಇಂದ್ರನ ನಗರಿಯಾದ ಅಮರಾವತಿಯನ್ನು ಮುತ್ತಿದರು. ದೇವತೆಗಳಿಗೂ ದೈತ್ಯರಿಗೂ ಭೀಕರ ಕಾಳಗವಾಯಿತು. ದೇವತೆಗಳು ದಾನವರಿಂದ ಯುದ್ಧದಲ್ಲಿ ಹೀನಾಯವಾಗಿ ಸೋತರು. ಇಂದ್ರನು ದೈತ್ಯರಿಗೆ ಶರಣಾದನು.

ನಂತರ ಇಂದ್ರನು ದೇವತೆಗಳನ್ನು ಕರೆದುಕೊಂಡು ಬ್ರಹ್ಮದೇವರನ್ನು ಮೊರೆಹೊಕ್ಕನು. ಬ್ರಹ್ಮದೇವರು ಇಂದ್ರನಿಗೆ ಹೀಗೆ ಹೇಳಿದರು: "ಎಲೈ ಇಂದ್ರ, ಗುರುಶಾಪದಿಂದ ನಿನಗೆ ಈ ಗತಿಯು ಬಂದಿದೆ. ದೈತ್ಯರು ಕೆಟ್ಟವರೇನೋ ಸರಿ. ಆದರೆ ಗುರುಗಳನ್ನು ದೇವರಂತೆ ಪೂಜಿಸಿ ಗೌರವಿಸುತ್ತಾರೆ. ಆ ಗುರುಬಲವೇ ಅವರಿಗೆ ಸಿಂಹಬಲ ತಂದುಕೊಟ್ಟಿದೆ. ಈಗ ಏನೂ ಮಾಡಲು ಸಾಧ್ಯವಿಲ್ಲ. ನೀವು ಕೆಲವು ಕಾಲ ನಿನ್ನ ಕಷ್ಟಗಳನ್ನು ಸಹಿಸಲೇಬೇಕು. ವಿಶ್ವರೂಪನೆಂಬ ಮಹಾತೇಜಸ್ವಿಯೂ, ತಪಸ್ವಿಯೂ ಆದ ಒಬ್ಬ ಬ್ರಾಹ್ಮಣನಿದ್ದಾನೆ. ನೀವು ಆತನನ್ನು ಈ ಕೂಡಲೇ ಕಂಡು ನಿಮ್ಮ ಪುರೋಹಿತನನ್ನಾಗಿ ಮಾಡಿಕೊಳ್ಳಿರಿ. ಅವನಿಂದ ನಿಮಗೆ ಕಲ್ಯಾಣವಾಗುವುದು." ದೇವತೆಗಳು ಅದೇ ರೀತಿ ಮಾಡಿದರು.

ದೇವತೆಗಳ ಪ್ರಾರ್ಥನೆಗೆ ಸಂತಸಗೊಂಡ ವಿಶ್ವರೂಪನು ಅವರಿಗೆ ಸಹಾಯ ಮಾಡಲು ಸಮ್ಮತಿಸಿದನು; ಇಂದ್ರನಿಗೆ ಶಕ್ತಿ ತುಂಬಲು 'ನಾರಾಯಣ ಕವಚ' ಎಂಬ ಮಂತ್ರವನ್ನು ಅವನಿಗೆ ಬೋಧಿಸಿದನು. ನಾರಾಯಣ ಕವಚ ಮಂತ್ರವನ್ನು ಇಂದ್ರನು ಶ್ರದ್ಧೆಯಿಂದ ಕಲಿತು ಬಲಶಾಲಿಯಾದನು. ದೈತ್ಯರನ್ನು ಯುದ್ಧದಲ್ಲಿ ಹಿಮ್ಮೆಟ್ಟಿಸಿದನು.

ವಿಶ್ವರೂಪನ ತಂದೆ ದೇವಕುಲದವನು; ತಾಯಿ ದೈತ್ಯಕುಲದವಳು. ವಿಶ್ವರೂಪನು ಸೋಮ ಹವನದಲ್ಲಿ ದೇವತೆಗಳಿಗೆ ಹವಿಸ್ಸನ್ನು ಕೊಡುವಾಗ, ದೈತ್ಯರ ಮೇಲಿನ ಪ್ರೀತಿಯಿಂದ ಅವರಿಗೂ ಭಾಗವನ್ನು ಕೊಡುತ್ತಿದ್ದನು. ಈ ವಿಷಯ ಇಂದ್ರನಿಗೆ ತಿಳಿದಾಗ, ಕೋಪಗೊಂಡು ಹಿಂದು-ಮುಂದು ನೋಡದೆ ವಿಶ್ವರೂಪನ ಶಿರಸ್ಸನ್ನು ಕತ್ತರಿಸಿಹಾಕಿದನು.

ವಿಶ್ವರೂಪನ ಸಂಹಾರದ ವಾರ್ತೆ ತಿಳಿದ ಅವನ ತಂದೆ ತ್ವಷ್ಟವು ಕೋಪಗೊಂಡನು. ಇಂದ್ರನನ್ನು ಸಂಹರಿಸುವ ಪುತ್ರನನ್ನು ಪಡೆಯಲು ಒಂದು ಮಹಾಯಾಗವನ್ನು ಮಾಡಿದನು. "ಇಂದ್ರನ ಸಂಹಾರ ಮಾಡುವ ಮಗನೇ, ಅಗ್ನಿಯಿಂದ ಎದ್ದು ಬಾ" ಎಂದು ಕೂಗಿದನು. ಆಗ ಮೂರೂ ಲೋಕಗಳೂ ನಡುಗುವಂತೆ ಕ್ರೂರ ಧ್ವನಿಯಿಂದ ಚೀರುತ್ತಾ, ಭಯಂಕರವಾದ ವಿಕಾರರೂಪವುಳ್ಳ ದೈತ್ಯನೊಬ್ಬನು ಎದ್ದುಬಂದನು. ಇವನು ಇಡೀ ಲೋಕವನ್ನೇ ನುಂಗುತ್ತಾ ಸಾಗಿದ್ದರಿಂದ ಇವನಿಗೆ 'ವೃತ್ರಾಸುರ'ನೆಂಬ ಹೆಸರಾಯಿತು.

ವೃತ್ರಾಸುರನು ನೇರವಾಗಿ ಅಮರಾವತಿಯನ್ನು ನುಂಗಲು ಸಾಗಿದನು. ದೇವತೆಗಳು ಅಸ್ತ್ರಗಳಿಂದ ಅವನನ್ನು ಎದುರಿಸಿದರು. ದೇವತೆಗಳ ಅಸ್ತ್ರ-ಶಸ್ತ್ರಗಳಿಂದ ಏನೂ ಆಗಲಿಲ್ಲ. ಅವರ ಎಲ್ಲ ಅಸ್ತ್ರಗಳನ್ನೂ ವೃತ್ರಾಸುರನು ನುಂಗಿ ಹಾಕಿದನು. ಇದರಿಂದ ಕಂಗಾಲಾದ ದೇವತೆಗಳು ಶ್ರೀಮನ್ನಾರಾಯಣನ ಬಳಿಗೆ ಬಂದರು. ನಾರಾಯಣನು, "ದೇವತೆಗಳೇ, ನಾನು ಈಗ ಬರಲಾರೆನು. ಆದರೆ, ನೀವು ದಧೀಚಿ ಋಷಿಯ ಬಳಿಗೆ ತೆರಳಿರಿ. ಅವನೂ ಸಹ ನಾರಾಯಣ ಕವಚ ಮಂತ್ರವನ್ನು ಸಿದ್ಧಿಸಿಕೊಂಡು ತನ್ನ ಶರೀರವನ್ನು ಬಲಯುತವನ್ನಾಗಿ ಮಾಡಿಕೊಂಡಿದ್ದಾನೆ. ಅವನ ದೇಹವನ್ನು ನೀವು ಭಿಕ್ಷೆ ಬೇಡಿರಿ. ಅವನು ದೇವತೆಗಳಿಗಾಗಿ ತನ್ನ ದೇಹವನ್ನು ಕೊಡುವನು" ಎಂದನು. ದೇವತೆಗಳು ಹಾಗೆಯೇ ಮಾಡಿದರು. ದೇವತೆಗಳು ತನ್ನ ದೇಹವನ್ನು ಕೇಳಿದಾಗ ಸಂತೋಷದಿಂದಲೇ ದಧೀಚಿಯು ಒಪ್ಪಿದನು. ಅವನ ದೇಹದ ಮೂಳೆಯಿಂದ ಇಂದ್ರನು ವಜ್ರಾಯುಧವನ್ನು ತಯಾರಿಸಿದನು; ಈ ವಜ್ರಾಯುಧದಿಂದ ವೃತ್ರಾಸುರನನ್ನು ಸಂಹರಿಸಿದನು.




# ರಾಮಕೃಷ್ಣ ಮಹಾಸಂಘದ ಪರಿಹಾರ ಕಾರ್ಯಗಳು

ಡಾ. ಇ. ವಸಂತಕುಮಾರ್

*(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)*

**ಆಂಧ್ರಪ್ರದೇಶದ ಚಂಡಮಾರುತ ಪರಿಹಾರಕಾರ್ಯ ಮತ್ತು ಪುನರ್ವಸತಿ, ೧೯೭೭–೭೮**

**'ನೆನಪಿರಲಿ, ನವೆಂಬರ್, ನವೆಂಬರ್'** ಎಂಬುದೊಂದು ಆಂಧ್ರಪ್ರದೇಶದ ಗಾದೆ. ಆಂಧ್ರಪ್ರದೇಶದ ಸಮುದ್ರತೀರದ ಪ್ರದೇಶಗಳು ಸಾಮಾನ್ಯವಾಗಿ ಪ್ರತಿವರ್ಷವೂ ಚಂಡಮಾರುತಕ್ಕೆ ಒಳಗಾಗುತ್ತವೆ. ಆದರೆ ೧೯೭೭ರಲ್ಲಿ ಬೀಸಿದ ಚಂಡಮಾರುತ ಅತೀ ಪ್ರಚಂಡವಾಗಿತ್ತು. ಬಿರುಗಾಳಿ ೨೦ ಅಡಿಗಳಷ್ಟು ಎತ್ತರವಿದ್ದು, ಗಂಟೆಗೆ ೨೦೦ ಕಿ.ಮೀ. ವೇಗದಲ್ಲಿ ಬೀಸುತ್ತಿದ್ದು ಒಂದು ಮನೆಯಾಗಲಿ, ಮರವಾಗಲಿ ಟೆಲಿಫೋನ್ ಕಂಬವಾಗಲಿ ಕಾಣದಂತೆ ೩೫೦ ಕಿಲೋಮೀಟರ್‌ಗಳಷ್ಟು ಭೂಪ್ರದೇಶ ಮುಳುಗಿಹೋಯಿತು. ಎಲ್ಲೆಡೆ ನೀರು. ಭೂಮಿಯೇ ಕಾಣದ ಕಾರಣ ಸೇನೆಯ ಹೆಲಿಕಾಪ್ಟರ್‌ಗಳು ಇಳಿಯಲು ಸಾಧ್ಯವಾಗದೆ ಹಿಂತಿರುಗಬೇಕಾಯಿತು. ಮೇಲಿನಿಂದ ನೋಡಿದಾಗ ಸಾವಿರಾರು ಹೆಣಗಳು ಕಂಡವು, ನೂರಾರು ಮೃತದೇಹಗಳು ಪೊದೆಗಳಿಗೆ ಸಿಲುಕಿದ್ದುವು. ಗುಡಿಸಲುಗಳ ಮೇಲ್ಛಾವಣಿಗಳು ಮೌನವಾಗಿ ತೇಲುತ್ತಿದ್ದುವು. ಹತ್ತು ಸಾವಿರಕ್ಕೂ ಹೆಚ್ಚು ಜನ ಮತ್ತು ಒಂದು ಲಕ್ಷಕ್ಕೂ ಜಾನುವಾರುಗಳು ಸಾವಿಗೀಡಾದವು. ಸುಮಾರು ಹದಿನಾರು ಸಾವಿರ ಮನೆಗಳು ನೆಲಸಮವಾದವು. ಚಂಡಮಾರುತದಿಂದಾಗಿ ಎಪ್ಪತ್ತು ಸಾವಿರಕ್ಕೂ ಹೆಚ್ಚು ಜನರು ಹಾನಿಗೊಳಗಾಗಿ, ೩೪ ಸಾವಿರ ಜನ ಮನೆ ಕಳೆದುಕೊಂಡರು.

ಸುದ್ದಿ ಮಾಧ್ಯಮಗಳ ಮೂಲಕ ವಿಷಯ ತಿಳಿದ ಕೂಡಲೆ, ರಾಮಕೃಷ್ಣ ಮಿಷನ್ ಒಂದು ಬೃಹತ್ ಪರಿಹಾರ ಕಾರ್ಯಕ್ರಮವನ್ನು ನಿಯೋಜಿಸಿತು. ಅತಿಹಾನಿಗೊಳಗಾದ ಸ್ಥಳಗಳಿಗೆ ಅವಶ್ಯಕ ಪರಿಹಾರ ಸಾಮಗ್ರಿಗಳೊಂದಿಗೆ ಧಾವಿಸಿತು. ಹಾನಿಗೊಳಗಾದ ಇಪ್ಪತ್ತೈದು ಲಕ್ಷ ಜನರಿಗೆ, ತಯಾರಿಸಿದ ಆಹಾರ, ಉಣ್ಣೆ ಮತ್ತು ಹತ್ತಿ ಕಂಬಳಿ, ಸೀರೆ, ಪಂಚೆ, ಮಕ್ಕಳ ಉಡುಪು, ಪಾತ್ರೆಗಳು, ಮೇಣದ ಬತ್ತಿಗಳು, ಸಾಬೂನು ಮತ್ತಿತರ ನಿತ್ಯೋಪಯೋಗಿ ವಸ್ತುಗಳನ್ನು ವಿತರಿಸಲಾಯಿತು. ನಂತರ ಬೃಹತ್ ಪುನರ್ವಸತಿ ಕಾರ್ಯವನ್ನೂ ಕೈಗೊಳ್ಳಲಾಯಿತು.

ಚಂಡಮಾರುತದ ಹೊಡೆತವನ್ನು ತಡೆದುಕೊಳ್ಳಬಲ್ಲ, ಆರ್.ಸಿ.ಸಿ.ಯಿಂದ ಮಾಡಿದ ೧೦೦೦ ಮನೆಗಳನ್ನು ಕಟ್ಟಿಕೊಡಲು ನಿರ್ಧರಿಸಲಾಯಿತು. ಇದಕ್ಕಾಗಿ ಸಿಮೆಂಟ್ ಹಲಗೆಗಳನ್ನು ಮಾಡುವ ವಿದ್ಯುತ್‌ಚಾಲಿತ ಯಂತ್ರಗಳನ್ನು ಪುಲಿಗುಡ್ಡ ಎಂಬಲ್ಲಿ, ಕೃಷ್ಣಾ ನದಿಯ ದಂಡೆಯ ಮೇಲೆ ಸ್ಥಾಪಿಲಾಯಿತು. ಸುಮಾರು ೬೦೦ ಕೆಲಸಗಾರರನ್ನು ಈ ಕೆಲಸಕ್ಕೆ ನಿಯೋಜಿಸಲಾಯಿತು. ಈ ಸ್ಥಳ ಮನೆಗಳನ್ನು ಕಟ್ಟಬೇಕಾದ ಸ್ಥಳಕ್ಕೆ ೩೦ ಕಿ.ಮೀ. ದೂರದಲ್ಲಿತ್ತು. ರಾಮಕೃಷ್ಣ ಮಿಷನ್, ಸಮುದ್ರ ತೀರದಲ್ಲಿದ್ದ, ದುರ್ಗಮವಾದ ಹತ್ತು ಸ್ಥಳಗಳನ್ನು ಪರಿಹಾರಕಾರ್ಯಕ್ಕೆ ತೆಗೆದುಕೊಂಡಿತು. ಅಲ್ಲೆಲ್ಲ ಕುಡಿಯುವ ನೀರು ದುರ್ಲಭವಾಗಿತ್ತು, ದಾರಿಗಳು ಕೆಟ್ಟಿದ್ದುವು. ಆದರೂ ಪುಲಿಗುಡ್ಡದಿಂದ ಸಿಮೆಂಟಿನ ಹಲಗೆಗಳನ್ನು ಈ ಸ್ಥಳಗಳಿಗೆ ಸಾಗಿಸಿ, ಎಲ್ಲ ಬಗೆಯ ಕಷ್ಟಗಳನ್ನೂ ಎದುರಿಸಿ, ಹದಿನೈದು ತಿಂಗಳಿನಲ್ಲಿ ೧೦೦೦ ಮನೆಗಳನ್ನು ಕಟ್ಟಿ ಮುಗಿಸಲಾಯಿತು. ರಾಜ್ಯದ ಮುಖ್ಯಮಂತ್ರಿಗಳು, ದೇಶದ ಪ್ರಧಾನ ಮಂತ್ರಿಗಳು, ಅನೇಕ ಪ್ರಮುಖ ಅಧಿಕಾರಿಗಳು ಮತ್ತು ಹಳ್ಳಿಯ ಜನರು ಇದನ್ನು ಕಂಡು ಸಂತೋಷಪಟ್ಟರು. ಈ ಸಾವಿರ ಮನೆಗಳ ನಿರ್ಮಾಣದ ವೆಚ್ಚ ಒಟ್ಟು ೫೦ ಲಕ್ಷ ರೂಪಾಯಿಗಳು. ಇದರ ಶೇ.೫೦ರಷ್ಟನ್ನು ರಾಜ್ಯ ಸರ್ಕಾರ ತುಂಬಿಸಿತು. ಈ ಮನೆಗಳಲ್ಲದೆ, ಸಾಮೂಹಿಕ ಸಮಾರಂಭಗಳಿಗಾಗಿ ಎರಡು ಅಂತಸ್ತಿನ ಮೂರು ಸಮುದಾಯ ಭವನಗಳು ಮತ್ತು ಗ್ರಾಮದ ಒಳಗಡೆ ರಸ್ತೆಗಳನ್ನು ಕೂಡ ನಿರ್ಮಾಣ ಮಾಡಲಾಯಿತು. ಇವುಗಳ ವೆಚ್ಚ ೨೦ ಲಕ್ಷ ರೂ.ಗಳು. ನಂತರದ ವರ್ಷಗಳಲ್ಲಿ ಈ ಮನೆಗಳು ಅನೇಕ ಚಂಡಮಾರುತಗಳನ್ನು ಎದುರಿಸಿ ನಿಂತವು.

**ಮಹಾರಾಷ್ಟ್ರದ ಭೂಕಂಪ**

೧೯೯೩ರ ಸೆಪ್ಟೆಂಬರ್‌ನಲ್ಲಿ ಮಹಾರಾಷ್ಟ್ರದ ಲಾತೂರ್ ಮತ್ತು ಉಸ್ಮಾನಾಬಾದ್ ಜಿಲ್ಲೆಗಳ ಬಹುಭಾಗ ಭೂಕಂಪದಿಂದ ಹಾಳಾಯಿತು. ಸಹಸ್ರಾರು ಜನರು ಮನೆಗಳನ್ನು ಕಳೆದುಕೊಂಡರು. ರಾಮಕೃಷ್ಣ ಮಿಷನ್ ಆಹಾರ, ಬಟ್ಟೆಗಳು, ಪಾತ್ರೆಗಳು ಮತ್ತು ಇತರ ಪರಿಹಾರ ಸಾಮಗ್ರಿಗಳೊಡನೆ ಅಲ್ಲಿಗೆ ಧಾವಿಸಿತು. ಪ್ರಾಥಮಿಕ ಪರಿಹಾರಕಾರ್ಯ ಮುಗಿದ ಮೇಲೆ, ಪುನರ್ವಸತಿ ಕಾರ್ಯವನ್ನು ಕೈಗೊಂಡು ೬೪೬ ಭೂಕಂಪನಿರೋಧಕ ಮನೆಗಳನ್ನು ದುರ್ಬಲ ವರ್ಗದವರಿಗೆ ಕಟ್ಟಿಕೊಡಲಾಯಿತು. ಇದಲ್ಲದೆ ಮೂರು ಶಾಲೆಗಳು,

ಮೂರು ಸಮುದಾಯ ಮಂದಿರಗಳು, ಆರು ಮಕ್ಕಳ ಉದ್ಯಾನ ವನಗಳು, ಹಳ್ಳಿಯ ಒಳಗಡೆಯ ರಸ್ತೆಗಳು ಮತ್ತು ನೀರು ಸಂಗ್ರಹಣಾ ಕೇಂದ್ರಗಳನ್ನು ಕಟ್ಟಿಕೊಡಲಾಯಿತು. ಪ್ರತಿ ಮನೆ ೩೦೭ ಚದರ ಅಡಿಗಳಷ್ಟು ಇದ್ದು, ವಿದ್ಯುತ್ ಉಪಕರಣಗಳನ್ನು ಹೊಂದಿತ್ತು. ಪ್ರತಿ ಮನೆಯ ವೆಚ್ಚ ೫೫,೦೦೦ ರೂಪಾಯಿಗಳಾಗಿದ್ದು, ಒಟ್ಟು ವೆಚ್ಚ ೪೭೫ ಲಕ್ಷ ರೂಪಾಯಿಗಳಾದುವು. ದೇಶ ಮತ್ತು ವಿದೇಶದ ಅನೇಕ ಉದಾರಹೃದಯಿಗಳು ಇದಕ್ಕೆ ಸಹಾಯ ಮಾಡಿದರು. ಭೂಕಂಪವಾದ ನಾಲ್ಕೂವರೆ ತಿಂಗಳೊಳಗಾಗಿ ಮೊದಲನೆಯ ಮನೆಯನ್ನು ಹರೆಗಾಂವ್ ಹಳ್ಳಿಯಲ್ಲಿ ಉದ್ಘಾಟಿಸಲಾಯಿತು. ಹದಿನಾಲ್ಕು ತಿಂಗಳ ನಂತರ ಪುನರ್ನಿರ್ಮಿತ ಹರೆಗಾಂವ್ ಹಳ್ಳಿ ೪೨೪ ಮನೆಗಳೊಂದಿಗೆ ಉದಯವಾಯಿತು. ಹದಿನೈದು ತಿಂಗಳಿನ ನಂತರ ಇನ್ನೆರಡು ಗ್ರಾಮಗಳು – ಜವಳಗಾವಡಿ ಮತ್ತು ಕವಾಲಿ – ಎಲ್ಲ ಸೌಕರ್ಯಗಳೊಂದಿಗೆ ಪುನರ್ನಿರ್ಮಾಣವಾದುವು.

ಪುನರ್ವಸತಿ ಕಾರ್ಯಕ್ರಮ ಮುಗಿದ ಮೇಲೆ, ಪುನರುದ್ಧಾರ ಕಾರ್ಯಕ್ರಮದ ಅಡಿಯಲ್ಲಿ, ಕೆಲವು ತಿಂಗಳುಗಳ ನಂತರ, ಕವಾಲಿ ಹಳ್ಳಿಯಲ್ಲಿ ಒಂದು ಗ್ರಾಮೀಣ ಗೊಬ್ಬರದ ಕಾರ್ಖಾನೆಯನ್ನು ಪ್ರಾರಂಭಿಸಲಾಯಿತು. ಈ ಕಾರ್ಖಾನೆಯಲ್ಲಿ ಅಣುಜೀವಿಯೊಂದನ್ನು ಬಳಸಿಕೊಂಡು, ಅಡುಗೆಮನೆಯ ಮತ್ತು ತೋಟದ ತ್ಯಾಜ್ಯವಸ್ತುಗಳನ್ನು, ಶೀಘ್ರವಾಗಿ, ಉಪಯುಕ್ತ ಸಾವಯವ ಗೊಬ್ಬರಕ್ಕೆ ಪರಿವರ್ತಿಸುವ ವಿಧಾನವನ್ನು ಅಳವಡಿಸಿ ಕೊಳ್ಳಲಾಗಿತ್ತು. ನಂತರ ಈ ಬಗೆಯ ಕಾರ್ಖಾನೆ ಮತ್ತು ಇತರ ಉಪಯುಕ್ತ ಯೋಜನೆಗಳನ್ನು ಇನ್ನುಳಿದ ಎರಡು ಹಳ್ಳಿಗಳಲ್ಲೂ ಪ್ರಾರಂಭಿಸಲಾಯಿತು.

ಕೊನೆಯದಾಗಿ, ನರೇಂದ್ರಪುರದ ಲೋಕಶಿಕ್ಷಾ ಪರಿಷತ್ ಮತ್ತು ಮುಂಬೈನ ಎಕ್ಸೆಲ್ ಇಂಡಸ್ಟ್ರೀಸ್ ಅವರ ನೆರವಿನಿಂದ ಹರೆಗಾಂವ್, ಜವಳಗಾವಡಿ ಮತ್ತು ಕವಾಲಿ ಹಳ್ಳಿಗಳಲ್ಲಿ ಬೆಳೆ ಸುಧಾರಣಾಕ್ರಮಗಳು, ಸಾವಯವ ತೋಟ, ಕೋಳಿ ಸಾಕಣೆ, ಆಧುನಿಕ ಒಲೆಗಳು, ನೀರಾವರಿ ಪರಿಷ್ಕರಣ ಪದ್ಧತಿ, ಕ್ಷಾಮಕಾಲದ ಪ್ರಾಣಿಪಾಲನೆ, ಸ್ವಂತ ವ್ಯಾಪಾರ, ಹಣ್ಣಿನ ಬೆಳೆ, ಮರಗಳನ್ನು ನೆಡುವುದು, ಕಾಂಪೋಸ್ಟ್ ತಯಾರಿಸುವುದು, ಪ್ರಾಥಮಿಕ ಆರೋಗ್ಯ ಕೇಂದ್ರ, ಉಳಿತಾಯ ಯೋಜನೆ, ನಾಲೆಯ ದಂಡೆಗಳನ್ನು ಬಲಗೊಳಿಸುವುದು, ಅಣೆಕಟ್ಟು ತುಂಬಿ ಹರಿದಾಗ ನೀರನ್ನು ಉಳಿಸುವುದು ಮುಂತಾದ ಕಾರ್ಯಕ್ರಮಗಳನ್ನು ಜಾರಿಗೆ ತರಲಾಯಿತು. ರಾಜ್ಯಸರ್ಕಾರ ಪ್ರತ್ಯೇಕವಾಗಿ ಸ್ನಾನದ ಮನೆ ಮತ್ತು ಶೌಚಾಲಯವನ್ನು ಕಟ್ಟಿಕೊಟ್ಟಿದ್ದರೂ ಅವು ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ಮಿಷನ್ನಿನವರು ಅವನ್ನು ದುರಸ್ತಿಗೊಳಿಸಿದರು. ಕವಾಲಿ ಹಳ್ಳಿಯಲ್ಲಿ ಮಹಿಳೆಯರ ಕಾರ್ಯಕ್ರಮಗಳು ವಿಶಾಲವಾಗಿದ್ದ 'ಮಹಿಳಾ ಉದ್ಯೋಗ ಕೇಂದ್ರ' ದಲ್ಲಿ ನಡೆಯಲಾರಂಭಿಸಿದವು. ಅಲ್ಲಿ ಆರು ಹೊಲಿಗೆ ಯಂತ್ರಗಳನ್ನು ಸ್ಥಾಪಿಸಲಾಯಿತು. ಆ ಊರಿನ ಹುಡುಗಿಯೊಬ್ಬಳು ಇತರ ಮಹಿಳೆಯರಿಗೆ ತರಬೇತಿ ನೀಡಲಾರಂಭಿಸಿದಳು. ಇದನ್ನು 'ಮುಂಬೈ ಭಾರತೀಯ ಮಹಿಳಾ ಸಂಘ' ದೊಂದಿಗೆ ಸಂಬಂಧ ಪಡೆಯುವಂತೆ ಯೋಜಿಸಲಾಯಿತು. ಈ ಎಲ್ಲಾ ಯೋಜನೆಗಳನ್ನೂ ಸಂಪೂರ್ಣವಾಗಿ ಮುಗಿಸಲು ರಾಮಕೃಷ್ಣ ಮಿಷನ್ ೬೦ ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿತು. ಎಲ್ಲ ಕಾರ್ಯಕ್ರಮಗಳೂ ಇನ್ನು ಮುಂದೆ ಸ್ವತಂತ್ರವಾಗಿ ಸಾಗಲೆಂಬ ಉದ್ದೇಶದಿಂದ, ರಾಮಕೃಷ್ಣ ಮಿಷನ್ ಅವನ್ನೆಲ್ಲ ಸ್ಥಳೀಯ ಜನರಿಗೆ ವಹಿಸಿತು. ಈ ಕಾರ್ಯ, ಮುಂಬರುವ ಕಾರ್ಯಗಳಿಗೆ ಒಂದು ಮಾದರಿಯಾಗಿದೆ.

### ಆಂಧ್ರಪ್ರದೇಶದ ಚಂಡಮಾರುತ

೧೯೭೭ರ ನವೆಂಬರ್‌ನಲ್ಲಿ ಚಂಡಮಾರುತವೊಂದು ಆಂಧ್ರಪ್ರದೇಶದ ಕಡಲತೀರಕ್ಕೆ ಅಪ್ಪಳಿಸಿ ಸಹಸ್ರಾರು ಜನರು ಮತ್ತು ದನಕರುಗಳನ್ನು ಬಲಿ ತೆಗೆದುಕೊಂಡಿತು. ಮನೆಗಳು ಕೊಚ್ಚಿಹೋದುವು, ಮರಗಳು ಬುಡಮೇಲಾದವು. ಹೊಲಗದ್ದೆಗಳು ಹಾಳಾದವು. ಸುಮಾರು ಮೂವತ್ತು ಲಕ್ಷ ರೂಪಾಯಿಗಳಷ್ಟು ಆಹಾರ, ಬಟ್ಟೆ ಮತ್ತು ನಿತ್ಯೋಪಯೋಗಿ ವಸ್ತುಗಳೊಂದಿಗೆ ರಾಮಕೃಷ್ಣ ಮಿಷನ್ ಪರಿಸ್ಥಿತಿಯನ್ನು ಸುಧಾರಿಸಲು ಅಲ್ಲಿಗೆ ಧಾವಿಸಿತು. ನಂತರ ಪುನರ್ವಸತಿ ಕಾರ್ಯಕ್ರಮವನ್ನು ಪೂರ್ವ ಗೋದಾವರಿ ಜಿಲ್ಲೆಯಲ್ಲಿ, ದ್ವೀಪಗಳಲ್ಲಿರುವ ಮೂರು ಹಳ್ಳಿಗಳಲ್ಲಿ ೧೨ ಲಕ್ಷ ರೂ. ವೆಚ್ಚದಲ್ಲಿ ಕೈಗೊಳ್ಳಲಾಯಿತು. ಸರ್ಕಾರ ಮೂರು ಲಕ್ಷ ರೂಪಾಯಿಗಳನ್ನು ಕೊಟ್ಟಿತು. ಜನಗಳಿಗೆ ಆಶ್ರಯ ಮತ್ತು ಶಾಲೆ – ಎರಡೂ ಇರುವಂತೆ ಮೂರು ಕಟ್ಟಡಗಳನ್ನು ಕಟ್ಟಲಾಯಿತು. ಸಾಮಾನ್ಯ ದಿನಗಳಲ್ಲಿ ಇವು ಶಾಲೆಗಳಾಗುತ್ತಿದ್ದುವು. ಇವನ್ನು ಸಾಮೂಹಿಕ ಕಾರ್ಯಕ್ರಮಗಳಿಗೆ ಮತ್ತು ವೈದ್ಯಕೀಯ ತಪಾಸಣೆಗೂ ಉಪಯೋಗಿಸಲಾಗುತ್ತಿತ್ತು. ಇದಲ್ಲದೆ ಈ ಕಟ್ಟಡಗಳಿಗೆ ವಿದ್ಯುಚ್ಛಕ್ತಿ, ನೀರು, ಶೌಚಾಲಯ, ಕುರ್ಚಿ, ಮೇಜು, ಮಕ್ಕಳ ವಿದ್ಯಾಭ್ಯಾಸಕ್ಕೆ ಬೇಕಾಗುವ ಕಪ್ಪುಹಲಗೆ, ಪುಸ್ತಕಗಳು, ಶಿಕ್ಷಣ ಸಲಕರಣೆ – ಇವೆಲ್ಲವನ್ನೂ ಒದಗಿಸಲಾಯಿತು.

ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದ ಅಂಗವಾಗಿ ಎರಡು ದ್ವೀಪಗ್ರಾಮಗಳಲ್ಲಿ ಭಾಗಶಃ ಸರ್ಕಾರದ ಹಣ ಮತ್ತು ಫಲಾನುಭವಿಗಳ ಸಹಕಾರದಿಂದ ರಾಮಕೃಷ್ಣ ಮಿಷನ್ ಕಡಿಮೆ ಖರ್ಚಿನ ೭೦ ಶೌಚಾಲಯಗಳನ್ನು ನಿರ್ಮಿಸಿತು. ಕಾಲಾನುಕಾಲದಿಂದ ಸಾರಿಗೆ ಸಂಪರ್ಕವಿಲ್ಲದೆ ಕಷ್ಟಪಡುತ್ತಿದ್ದ ಜನರು ಒಂದು ಸೇತುವೆಗಾಗಿ ಮೊರೆಯಿಟ್ಟರು. ಮಿಷನ್ನಿನವರು ೧೬೦ ಮೀಟರ್ ಉದ್ದ ಮತ್ತು ೭.೫ ಮೀಟರ್ ಅಗಲದ ಕಾಂಕ್ರೀಟ್ ಸೇತುವೆಯನ್ನು ವೃದ್ಧಗೌತಮಿ ನದಿಯ ಪ್ರವಾಹಕ್ಕೆ ಅಡ್ಡಲಾಗಿ, ೩.೫ ಕೋಟಿ ರೂಪಾಯಿಗಳ ವೆಚ್ಚದಿಂದ ನಿರ್ಮಿಸಿದರು. ಇದರ ಅರ್ಧಾಂಶವನ್ನು ಸರಕಾರ ಕೊಟ್ಟಿತು. ಪ್ರವಾಹದ ದೆಸೆಯಿಂದ ಹವಾಮಾನ ವೈಪರೀತ್ಯದಿಂದ ಕೂಡಿತ್ತು. ಇದ್ದಕ್ಕಿದ್ದಂತೆ ನದಿಯಲ್ಲಿ ನೀರು ಏರಿತು. ಹೀಗೆ ಮತ್ತಷ್ಟು ತೊಂದರೆಗಳಾದರೂ






ಸೇತುವೆಯನ್ನು ಅಂದಾಜು ಲೆಕ್ಕದಂತೆ ನಿಗದಿತ ಸಮಯದೊಳಗಾಗಿ (ಎರಡು ವರ್ಷ) ಕಟ್ಟಿ ಮುಗಿಸಲಾಯಿತು. ೨೦೦೦ದ ಜನವರಿ ೧೨ರಂದು ಈ ಸೇತುವೆಯ ಉದ್ಘಾಟನೆ ನಡೆಯಿತು. ಇದಕ್ಕೆ **'ಸ್ವಾಮಿ ವಿವೇಕಾನಂದ ಸೇತುವೆ'** ಎಂದು ನಾಮಕರಣ ಮಾಡ ಲಾಯಿತು. ಜೊತೆಗೆ, ಸೇತುವೆಯ ದ್ವಾರದಲ್ಲಿ ಒಂಬತ್ತುವರೆ ಅಡಿ ಎತ್ತರದ ಸ್ವಾಮೀಜಿಯವರ ಕಂಚಿನ ಪ್ರತಿಮೆಯನ್ನು ಸ್ಥಾಪಿಸಿ, ಮಕ್ಕಳ ಉದ್ಯಾನವನವನ್ನು ತೆರೆಯಲಾಯಿತು. ನಿಜಕ್ಕೂ ಇದು ರಾಮಕೃಷ್ಣ ಮಿಷನ್ನಿನ ಪರಿಹಾರ ಮತ್ತು ಪುನರ್ವಸತಿಯ ಶತಮಾನೋತ್ಸವ ಸಂದರ್ಭದಲ್ಲಿ ದೇಶದ ಜನತೆಗೆ ನೀಡಿದ ಒಂದು ಭವ್ಯ ಕೊಡುಗೆಯಾಗಿದೆ.

### ಒರಿಸ್ಸಾದ ಮಹಾಚಂಡಮಾರುತ

ಹಿಂದೆಂದೂ ಕಾಣದ ಚಂಡಮಾರುತವೊಂದು ಗಂಟೆಗೆ ೩೦೦ ಕಿ.ಮೀ. ವೇಗದಿಂದ ಒರಿಸ್ಸಾದ ತೀರಪ್ರದೇಶವನ್ನು ಪರದ್ವೀಪ ಎಂಬಲ್ಲಿ, ೧೯೯೯ರ ಅಕ್ಟೋಬರ್ ೨೯ರಂದು ಅಪ್ಪಳಿಸಿತು. ಸಹಸ್ರಾರು ಜನರು ಸತ್ತರು, ಲಕ್ಷಾಂತರ ಗೋವುಗಳು ಮರಣಹೊಂದಿದವು ಮತ್ತು ಲಕ್ಷಾಂತರ ಕಟ್ಟಡಗಳು ನಾಶಗೊಂಡವು. ಪ್ರಾರಂಭಿಕ ಪರಿಹಾರಕಾರ್ಯವನ್ನು ರಾಮಕೃಷ್ಣ ಮಿಷನ್ ಜಗತ್ ಸಿಂಗಪುರ, ಕೇಂದ್ರಪಾರಾ, ಪುರಿ ಮತ್ತು ಮೂರು ಇತರ ಜಿಲ್ಲೆಗಳಲ್ಲಿ




ಕೈಗೊಂಡಿತು. ಅಪಾರ ಪ್ರಮಾಣದ ಆಹಾರಸಾಮಗ್ರಿ, ವಸ್ತ್ರಗಳು, ಕಂಬಳಿ, ದೀಪಗಳು, ಪಾತ್ರೆ ಮುಂತಾದುವನ್ನು ೧ ಕೋಟಿ ೨೦ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ೯೦೦೦ ಕುಟುಂಬಗಳಿಗೆ ಒಂದು ತಿಂಗಳೊಳಗಾಗಿ ವಿತರಿಸಲಾಯಿತು. ನಂತರ, ೩೨೭ ಮನೆಗಳು, ರಕ್ಷಣಾಶಿಬಿರಗಳನ್ನು ಒಳಗೊಂಡ ೬ ಶಾಲೆಗಳು, ೨೫ ಕೊಳವೆ ಬಾವಿಗಳು ಮತ್ತು ೨೦ ಕೈಪಂಪುಗಳನ್ನು ನಿರ್ಮಿಸಿ ಒದಗಿಸಲಾಯಿತು. ಇದಕ್ಕೆಲ್ಲ ಒಟ್ಟು ವೆಚ್ಚ ೪ ಕೋಟಿ ರೂಪಾಯಿಗಳಾದುವು. ಈ ಪರಿಹಾರ ಕಾರ್ಯ ೨ ವರ್ಷಗಳಲ್ಲಿ ಮುಕ್ತಾಯವಾಯಿತು.

### ಗುಜರಾತಿನ ಭೂಕಂಪ

೨೦೦೧, ಜನವರಿ ೨೬ರ ಪ್ರಾತಃಕಾಲ. ಭಾರತದ ಗಣ ರಾಜ್ಯೋತ್ಸವ. ಆದರೆ ಅದು ಭೀಕರ ದುರಂತದ ದಿನವಾಗಿತ್ತು. ಹಿಂದೆ ಎಂದೂ ಆಗಿರದ ಗರಿಷ್ಠ ಪ್ರಮಾಣದ ಭೂಕಂಪ ಅಂದು ಬೆಳಗ್ಗೆ ಗುಜರಾತಿನಲ್ಲಿ ಸಂಭವಿಸಿತು. ಭೂಜ್ ನಗರದಲ್ಲಿ ಅತಿ ಹೆಚ್ಚು ಹಾನಿಯಾಗಿತ್ತು. ಇದಕ್ಕೆ 'ಭೂಜ್ ಭೂಕಂಪ'ವೆಂದೇ ಹೆಸರಾಯಿತು. ನಮ್ಮ ದೇಶದಲ್ಲಿ ದಾಖಲೆ ಸೃಷ್ಟಿಸಿದ ಭೂಕಂಪ ಇದಾಗಿತ್ತು. ಕನಿಷ್ಠಪಕ್ಷ ೫೦,೦೦೦ ಜನರು ಆ ದಿನ ನಾಶವಾದರು. ಒಂದು ಲಕ್ಷಕ್ಕೂ ಹೆಚ್ಚು ಜನರಿಗೆ ಗಾಯಗಳಾಗಿದ್ದವು. ಸುಮಾರು ೬ ಲಕ್ಷ ಜನರು ನಿರಾಶ್ರಿತರಾಗಿದ್ದರು. ಮೂರು ಲಕ್ಷಕ್ಕೂ ಹೆಚ್ಚು ಮನೆಗಳು ನೆಲಸಮವಾಗಿದ್ದವು. ಎಂದಿನಂತೆ ರಾಮಕೃಷ್ಣ ಮಿಷನ್ ಕೂಡಲೆ ಗುಜರಾತಿನ ತನ್ನ ಕೇಂದ್ರಗಳ ಮೂಲಕ ಪರಿಹಾರ ಸಾಮಗ್ರಿಗಳನ್ನು ರವಾನಿಸಿತು. ಸೇವಾಪಟುಗಳಾದ ಸಂನ್ಯಾಸಿಗಳನ್ನು ಕಲ್ಕತ್ತೆಯಿಂದ ಕಳುಹಿಸಲಾಯಿತು. ಆಹಾರ, ಊಟದ ಪೊಟ್ಟಣಗಳು, ಬಿಸ್ಕತ್, ಕುಡಿಯುವ ನೀರು, ಅಕ್ಕಿ, ದ್ವಿದಳ ಧಾನ್ಯ, ಎಣ್ಣೆ, ರಕ್ತದ ಶೀಷೆಗಳು, ಉಡುಪು, ಕಂಬಳಿ, ಹಾಸು, ಟವೆಲ್, ಸ್ವೆಟರ್ ಮತ್ತು ಇತರ ನಿತ್ಯೋಪಯೋಗಿ ವಸ್ತುಗಳನ್ನು ಕಛ್, ರಾಜ್‌ಕೋಟ್, ಜಾಮ್ ನಗರ್, ಪೋರ್‌ಬಂದರ್ ಮತ್ತು ಸುರೇಂದ್ರನಗರ್ ಜಿಲ್ಲೆಗಳ ಹಲವಾರು ಹಳ್ಳಿಗಳಲ್ಲಿ ವಿತರಿಸಲಾಯಿತು. ವಿವಿಧ ಸ್ಥಳಗಳಲ್ಲಿ ಬಿದ್ದಿದ್ದ ಶವಗಳ ದಹನಕ್ಕಾಗಿ ೧೧,೦೦೦ ಕಿಲೋಗ್ರಾಂಗಳಷ್ಟು ಸೌದೆಯನ್ನೂ ರಾಮಕೃಷ್ಣ ಮಿಷನ್ ಒದಗಿಸಿತು. ಭೂಜ್ ಮತ್ತು ಸುತ್ತಮುತ್ತಲಿನ

ಸ್ಥಳಗಳಲ್ಲಿ ವೈದ್ಯಕೀಯ ಶಿಬಿರಗಳನ್ನು ತೆರೆಯಲಾಯಿತು. ನೂರಂದವರಿಗೆ ತಾತ್ಕಾಲಿಕ ಶಿಬಿರಗಳನ್ನು ಆರಂಭಿಸಲಾಯಿತು. ಅತ್ಯಂತ ಹಾನಿಗೊಳಗಾದವರಿಗಾಗಿ ೩೯೦ ಭೂಕಂಪನಿರೋಧಕ ಮನೆಗಳನ್ನೂ, ೮೧ ಶಾಲೆಗಳನ್ನೂ ಹಾನಿಗೊಳಗಾದ ಪ್ರದೇಶಗಳಲ್ಲಿ ನಿರ್ಮಿಸಲಾಯಿತು. ಪರಿಹಾರಕಾರ್ಯ ಎರಡು ವರ್ಷಗಳಿಗೂ ಮೀರಿ ನಡೆದು ೨೦೦೩ರ ಏಪ್ರಿಲ್‌ನಲ್ಲಿ ಮುಕ್ತಾಯವಾಯಿತು. ಇದಕ್ಕೆ ಒಟ್ಟು ವೆಚ್ಚ ೧೬ ಕೋಟಿ ೯೦ ಲಕ್ಷ ರೂಪಾಯಿಗಳಾದವು.

ರಾಮಕೃಷ್ಣ ಮಿಷನ್ ಮಾಡಿದ ಕೆಲವು ಮುಖ್ಯವಾದ ಪರಿಹಾರ ಕಾರ್ಯಗಳನ್ನು ಮಾತ್ರ ಇಲ್ಲಿ ನಮೂದಿಸಲಾಗಿದೆ. ಇವಲ್ಲದೆ ಮಿಷನ್ ೨೦೦೧ರಿಂದ ೨೦೦೪ರವರೆಗೆ, ಒರಿಸ್ಸಾ, ಉತ್ತರ ಪ್ರದೇಶ, ಅಸ್ಸಾಂ, ಬಿಹಾರ್ ಮತ್ತು ಪಶ್ಚಿಮ ಬಂಗಾಳಗಳಲ್ಲಿ ಪ್ರವಾಹಪರಿಹಾರ ಕಾರ್ಯವನ್ನು ಕೈಗೊಂಡಿತು. ಇದರಲ್ಲಿ ೨೦೦೪ರಲ್ಲಿ ನಡೆದ ಪಶ್ಚಿಮ ಬಂಗಾಲದ ಚಂಡಮಾರುತದ ಪರಿಹಾರ ಕಾರ್ಯಕ್ರಮವೂ ಸೇರಿದೆ. ೧೯೯೯ರಲ್ಲಿ 'ಪ್ರಧಾನಮಂತ್ರಿಗಳ ರಾಷ್ಟ್ರೀಯ ರಕ್ಷಣಾ ನಿಧಿ'ಗೆ ರಾಮಕೃಷ್ಣ ಮಿಷನ್ ೧೦ ಲಕ್ಷ ರೂಪಾಯಿಗಳನ್ನು ನೀಡಿತು. ದೇಶದ ಅತ್ಯಂತ ಶೀತಪ್ರದೇಶಗಳಲ್ಲಿನ ಬಡಜನರಿಗೆ ಬೆಚ್ಚನೆಯ ಉಡುಪುಗಳನ್ನು ವಿತರಿಸುವ ವಾರ್ಷಿಕ ಕಾರ್ಯಕ್ರಮವನ್ನೂ ಮಿಷನ್ ಮಾಡುತ್ತಿದೆ. ಇವು ರಾಮಕೃಷ್ಣ ಮಿಷನ್ನಿನ ಹಲವಾರು ಕೇಂದ್ರಗಳು ನಡೆಸುತ್ತಿರುವ ನೂರಾರು ಕಾರ್ಯಕ್ರಮಗಳ ಕೆಲವು ಉದಾಹರಣೆಗಳಷ್ಟೆ.

### ವಿದೇಶಗಳಲ್ಲಿ ನಡೆಸಿದ ಕೆಲವು ಪರಿಹಾರ ಕಾರ್ಯಕ್ರಮಗಳು

ಮಿಷನ್ನಿನ ಪರಿಹಾರ ಕಾರ್ಯಕ್ರಮಗಳು ಭಾರತಕ್ಕೆ ಸೀಮಿತ ವಾಗಿಲ್ಲ. ನೆರೆರಾಷ್ಟ್ರಗಳಾದ ಶ್ರೀಲಂಕಾ, ನೇಪಾಳ ಮತ್ತು ಬಾಂಗ್ಲಾ ದೇಶಗಳಲ್ಲಿಯೂ ಮತ್ತು ೧೯೯೨ರಲ್ಲಿ ರಷ್ಯಾದಲ್ಲಿಯೂ ಪರಿಹಾರ ಕಾರ್ಯಕ್ರಮಗಳು ನಡೆದಿವೆ.

ಹಿಂದೆ ಬಾಂಗ್ಲಾದೇಶ ಪೂರ್ವ ಪಾಕಿಸ್ತಾನವೆನಿಸಿತ್ತು. ೧೯೪೭ –೫೦ರಲ್ಲಿ ಅಲ್ಲಿಂದ ಬಂದ ಸಹಸ್ರಾರು ವಲಸಿಗರಿಗೆ ಮಾಡಿದ ಪರಿಹಾರ ಕಾರ್ಯಕ್ರಮವನ್ನು ಈಗಾಲೇ ತಿಳಿಸಲಾಗಿದೆ. ೧೯೬೪ರ ಜನವರಿಯಲ್ಲಿ ಮತ್ತೆ ಬಾಂಗ್ಲಾ ದೇಶದಲ್ಲಿ ಗಲಭೆಗಳು ಇದ್ದಕ್ಕಿದ್ದಂತೆ ಕಾಣಿಸಿಕೊಂಡು ದೊಡ್ಡ ಸಂಖ್ಯೆಯಲ್ಲಿ, ಗಂಡಸರು ಹೆಂಗಸರು ಮಕ್ಕಳು ಭಾರತದ ಗಡಿಯನ್ನು ದಾಟಿ ಬಂದರು. ಆಗಲೂ ಕೂಡ ಮಿಷನ್ ಪರಿಹಾರ ಕಾರ್ಯಕ್ರಮವನ್ನು ನಡೆಸಿತು. ೧೯೭೧ರಲ್ಲಿ ಬಾಂಗ್ಲಾದೇಶ ಅಸ್ತಿತ್ವಕ್ಕೆ ಬಂದಿತು. ಅಂದಿನಿಂದ ಪ್ರತಿವರ್ಷವೂ ಅಲ್ಲಿನ ಮಿಷನ್ ಕೇಂದ್ರಗಳು ಪರಿಹಾರ (ಹಾಲಿನ ಪುಡಿ ಮತ್ತು ಉಡುಪುಗಳ ವಿತರಣೆ, ವೈದ್ಯಕೀಯ ಸೌಲಭ್ಯ, ಪುಸ್ತಕಗಳು, ಪಠ್ಯಪುಸ್ತಕಗಳು, ಪರೀಕ್ಷಾಶುಲ್ಕ – ಇವನ್ನೆಲ್ಲ ಒದಗಿಸುವುದು) ಮತ್ತು ಪುನರ್ವಸತಿ ಕಾರ್ಯಕ್ರಮಗಳನ್ನು ನಡೆಸುತ್ತ ಬಂದಿವೆ.

೧೯೮೦ರಲ್ಲಿ ನೇಪಾಳದಲ್ಲಿ ಭಾರಿ ಭೂಕಂಪವಾಯಿತು. ಆಗ ಲಖನೌದಲ್ಲಿರುವ 'ರಾಮಕೃಷ್ಣ ಮಿಷನ್ ಸೇವಾಶ್ರಮ' ಹದಗೆಟ್ಟ ರಸ್ತೆಗಳು ಮತ್ತು ಅಪಾಯಕಾರಿಯಾದ ಎತ್ತರದ ಭೂಪ್ರದೇಶ ಗಳನ್ನೂ ಲೆಕ್ಕಿಸದೆ, ಅಹಾರ ಬಟ್ಟೆ ಕಂಬಳಿ ಪಾತ್ರೆಗಳು – ಇವನ್ನೆಲ್ಲ ನೂರಂದ ಜನರಿಗೆ, ಪರಿಸ್ಥಿತಿ ಸಾಮಾನ್ಯವಾಗುವವರೆಗೂ ವಿತರಿಸಿತು.

೧೯೮೩ರಲ್ಲಿ ಶ್ರೀಲಂಕಾ ಸರಕಾರಕ್ಕೂ, ಎಲ್.ಟಿ.ಟಿ.ಇ.ಗೂ ನಡೆದ ಘರ್ಷಣೆಯಿಂದಾಗಿ ಭಾರತೀಯ ಮೂಲದ ಶ್ರೀಲಂಕಾ ನಾಗರಿಕರು ಜೀವಭಯದಿಂದ, ದೋಣಿಗಳಲ್ಲಿ ಭಾರತಕ್ಕೆ ಬಂದು ಬಿಟ್ಟರು. ಆಗ ಮದರಾಸಿನ ರಾಮಕೃಷ್ಣ ಮಿಷನ್ ಅನೇಕ ವರ್ಷ ಗಳ ಕಾಲ ಅವರ ಯೋಗಕ್ಷೇಮವನ್ನು ನೋಡಿಕೊಂಡಿತು. ಇದಲ್ಲದೆ ಶ್ರೀಲಂಕಾದ ಬಟ್ಟಿಕೋಲದಲ್ಲಿರುವ ರಾಮಕೃಷ್ಣ ಮಿಷನ್ ಅಲ್ಲಿನ ಸ್ವಚ್ಛತಾಸಿಬ್ಬಂದಿಗೆ ಕಡಿಮೆ ಖರ್ಚಿನ ೨೭ ಮನೆಗಳನ್ನು ಕಟ್ಟಿಕೊಟ್ಟಿತು. ಪ್ರತಿ ಮನೆಯಲ್ಲಿ ಎರಡು ಕೋಣೆಗಳು, ಒಂದು ಬಾವಿ, ಒಂದು ಶೌಚಾಲಯ ಇದ್ದವು. ಸ್ವಾಮಿ ವಿವೇಕಾನಂದರು ೧೮೯೭ರ ಜನವರಿ ೧೫ರಂದು ಅಮೆರಿಕದಿಂದ ಹಿಂತಿರುಗಿದಾಗ ಮೊದಲು ಶ್ರೀಲಂಕಾದಲ್ಲಿ ಪದಾರ್ಪಣೆ ಮಾಡಿದರು. ಆ ಚಾರಿತ್ರಿಕ ಘಟನೆಯ ಶತಮಾನೋತ್ಸವದ ನೆನಪಿಗಾಗಿ ಸುಮಾರು ಏಳೂವರೆ ಲಕ್ಷ ರೂಪಾಯಿಗಳ ವೆಚ್ಚದಲ್ಲಿ, ಈ ಮನೆಗಳನ್ನು ನಿರ್ಮಿಸಲಾಗಿದೆ.

೧೯೯೨ರಲ್ಲಿ ರಷ್ಯಾದೇಶದಲ್ಲಿ ಒಂದು ದೊಡ್ಡ ರಾಜಕೀಯ ಮತ್ತು ಆರ್ಥಿಕ ಸಂಕಟ ಉಂಟಾಯಿತು. ಭಾರತ ಸರ್ಕಾರ ಮತ್ತು ರಷ್ಯಾದ ರಾಯಭಾರ ಕಛೇರಿಯ ಅನುಮತಿಯೊಂದಿಗೆ ಕ್ಷೋಭೆಗೊಳಗಾದ ಆ ದೇಶದ ಸಹೋದರ ಸಹೋದರಿಯರಿಗೆ ಅಲ್ಲಿನ ರಾಮಕೃಷ್ಣ ಮಿಷನ್ ಪರಿಹಾರ ಕಾರ್ಯಕ್ರಮವನ್ನು ನಡೆಸಿತು. ಸುಮಾರು ೩೦೦೦ ಕೆ.ಜಿ. ಮಕ್ಕಳ ಆಹಾರ, ೩೦೦೦ ಕೆ.ಜಿ. ಹಾಲಿನ ಪುಡಿ, ೨೯೦೦ ಕೆ.ಜಿ. ಸಕ್ಕರೆಯನ್ನು ವಿಮಾನದಲ್ಲಿ ಭಾರತದಿಂದ ಕಳುಹಿಸಲಾಯಿತು. ಏರ್ ಇಂಡಿಯಾದ ಆಡಳಿತ ವರ್ಗ ಈ ವಿಮಾನ ಸೇವೆಯ ವೆಚ್ಚವನ್ನು ವಹಿಸಿಕೊಂಡಿತು. ಇದರಿಂದ ರಷ್ಯಾದ ೧೦೦೦ ಜನರಿಗೆ ಅನುಕೂಲವಾಯಿತು.

### ಪರಿಹಾರಕಾರ್ಯ ವಿಧಾನ

ಮಾನವರಿಗೆ ಒದಗುವ ವಿಪತ್ತುಗಳು ಎರಡು ಬಗೆ. ಒಂದು ಮಾನವನಿರ್ಮಿತ, ಇನ್ನೊಂದು ಪ್ರಕೃತಿವಿಕೋಪ. ಪ್ರವಾಹ, ಕ್ಷಾಮ, ಬರಗಾಲ, ಭೂಕಂಪ, ಚಂಡಮಾರುತ, ಕಾಳ್ಗಿಚ್ಚು ಇವು ಪ್ರಕೃತಿಯಿಂದ ಉಂಟಾಗುವಂಥವು. ಮತಾಂಧತೆ ಹಾಗೂ ಧರ್ಮದ್ವೇಷದಿಂದ ಪ್ರೇರಿತವಾದ ಹಿಂಸಾಚಾರ, ಲೂಟಿ, ಆಕಸ್ಮಿಕ ಬೆಂಕಿ ಅನಾಹುತ – ಇವು ಮಾನವಕೃತವಾದುವು. ಭಾರಿ ಪ್ರಮಾಣದ ವಿಕೋಪದ ವಾರ್ತೆ ತಿಳಿಯುತ್ತಿದ್ದಂತೆ ರಾಮಕೃಷ್ಣ ಮಿಷನ್ ತಂಡವೊಂದನ್ನು ಕೂಡಲೆ ಸ್ಥಳಕ್ಕೆ ಕಳುಹಿಸಿ, ಅದರಿಂದ ಅನಾಹುತದ ಪ್ರಮಾಣ ಮತ್ತು ಹಾನಿಗೊಳಗಾದವರಿಗೆ ಬೇಕಾದ ಪರಿಹಾರದ ಪ್ರಮಾಣವನ್ನು ತಿಳಿದುಕೊಳ್ಳುತ್ತದೆ. ಅಲ್ಲಿನ ಸರ್ಕಾರದ ಆಡಳಿತಾಧಿಕಾರಿಗಳಿಂದ ಪರಿಹಾರಕಾರ್ಯವನ್ನು ಮಾಡುವ ಆವಶ್ಯಕತೆ ಇದೆಯೆ ಎಂದು ತಿಳಿದುಕೊಂಡು, ನಂತರ ಒಂದು ಸುದೀರ್ಘ ಸರ್ವೇಕ್ಷಣೆಯನ್ನು ಮಾಡಿ, ನೆರವು ಬೇಕಾಗಿರುವವರನ್ನು ಗುರುತಿಸಿ, ಅವರಿಗೆ ಆದಷ್ಟು ಶೀಘ್ರವಾಗಿ ಗುರುತಿನ ಚೀಟಿಗಳನ್ನು ಕೊಡಲಾಗುವುದು. ಅನಂತರ, ಪರಿಹಾರ ಸಾಮಗ್ರಿಗಳನ್ನು ಪಡೆದುಕೊಂಡು ಕೂಡಲೆ ಸಂತ್ರಸ್ತ ಸ್ಥಳಕ್ಕೆ ಹೋಗಲಾಗುವುದು. ನಂತರ ಆ ಸಾಮಗ್ರಿಗಳನ್ನು ಕ್ರಮವಾಗಿ ವಿತರಣೆ ಮಾಡಿ ಲೆಕ್ಕ ಇಟ್ಟುಕೊಳ್ಳಲಾಗುವುದು. ಸಾಮಾನ್ಯವಾಗಿ ಸ್ಥಳೀಯ ಸ್ವಯಂ ಸೇವಕರನ್ನೇ ಇದಕ್ಕೆ ಬಳಸಿಕೊಳ್ಳಲಾಗುತ್ತದೆ. ಇದರಿಂದ ಸೇವಾ ಕಾರ್ಯ ಸುಗಮವಾಗಿ, ಕ್ಷೇಮವಾಗಿ ನಡೆಯುತ್ತದೆ.

ರಾಮಕೃಷ್ಣ ಮಿಷನ್ನಿನ ಪರಿಹಾರ ಕಾರ್ಯ ಇಲ್ಲಿನ ಸಂನ್ಯಾಸಿ ಗಳ ಆಧ್ಯಾತ್ಮಿಕ ಸಾಧನೆಯ ಒಂದು ಅಂಗವೆನ್ನುವುದನ್ನು ನೆನಪಿನಲ್ಲಿಡಬೇಕು. ಪರಿಹಾರಕಾರ್ಯವನ್ನು ಭಗವತ್ಸಮರ್ಪಣೆ ಮತ್ತು ಜೀವಸೇವೆಯ ದೃಷ್ಟಿಯಿಂದ ಮಾಡಲಾಗುತ್ತದೆ. ಸ್ವಾಮಿ

ವಿವೇಕಾನಂದರು ಹೇಳಿದಂತೆ, "ಕೊಡುವವನು ಉದ್ಧಾರವಾಗುವನು, ಸ್ವೀಕರಿಸುವವನಲ್ಲ." ಶ್ರೀರಾಮಕೃಷ್ಣರ ಮತ್ತೊಬ್ಬ ಪ್ರಮುಖ ಶಿಷ್ಯರಾದ ಸ್ವಾಮಿ ಪ್ರೇಮಾನಂದರು ಪರಿಹಾರಕಾರ್ಯದಲ್ಲಿ ತೊಡಗಲು ತಯಾರಾಗಿದ್ದ ಕೆಲವು ಯುವಕರನ್ನು ಕುರಿತು ಹೀಗೆ ಹೇಳಿದರು: "ಶ್ರೀರಾಮಕೃಷ್ಣರು ನಿಮ್ಮನ್ನು ಕೇವಲ ಸ್ವಲ್ಪ ಅಕ್ಕಿಯನ್ನು ಹಂಚಲು ಕಳುಹಿಸುತ್ತಿಲ್ಲ. ನೀವು ಕೊಡಬೇಕಾದುದು ದೈವತ್ವವನ್ನು ಮತ್ತು ಹಿರಿತನವನ್ನು. ಉನ್ನತ ಪ್ರಜ್ಞೆ ಮತ್ತು ವಿಶಾಲ ಹೃದಯವನ್ನು ಹೇಗೆ ಪಡೆದುಕೊಳ್ಳಬೇಕೆಂಬುದನ್ನು ಕಲಿಯಿರಿ. ಇಂತಹ ಅವಕಾಶ ಮತ್ತೊಮ್ಮೆ ದೊರೆಯದು." ಮತ್ತೆ ಅವರು, ೧೯೧೫-೧೬ ರಲ್ಲಿ ಬಾಂಕುರ ಜಿಲ್ಲೆಯಲ್ಲಿ ಕ್ಷಾಮಪರಿಹಾರ ಕಾರ್ಯದಲ್ಲಿ ತೊಡಗಿದ್ದವರಿಗೆ ಹೀಗೆ ಬರೆದರು: "ಹಿಂದಿನ ಜನ್ಮಗಳಲ್ಲಿ ನೀವು ಸಂಪಾದಿಸಿರುವ ಪುಣ್ಯಫಲದಿಂದ, ಕಷ್ಟದಲ್ಲಿರುವವರಿಗೆ ಸೇವೆಯನ್ನು ಮಾಡುವ ಸ್ವಾಮಿ ವಿವೇಕಾನಂದರ ಅಪೂರ್ವ ಕೊಡುಗೆಯನ್ನು ಪಡೆದಿರುವಿರಿ. ಆದರೂ, 'ವೇದಾಂತ' ಮತ್ತು 'ಜೀವಿಗಳ ಸೇವೆ' ಒಂದೇ ಎಂದು ತಿಳಿದುಕೊಳ್ಳುವವರೆಗೂ ಮಹಾತ್ಮರಾದ ಬುದ್ಧ ಮತ್ತು ಸ್ವಾಮಿ ವಿವೇಕಾನಂದರಿಂದ ದೂರವೇ ಉಳಿದಿರುತ್ತೀರಿ." ಈ ಆಧ್ಯಾತ್ಮಿಕ ದೃಷ್ಟಿ ರಾಮಕೃಷ್ಣ ಮಿಷನ್ನಿನ ಪರಿಹಾರಕಾರ್ಯಗಳಿಗೆ, ಇತರರ ಪರಿಹಾರಕಾರ್ಯಗಳಲ್ಲಿ ಇರದ ಒಂದು ವಿಶಿಷ್ಟ ಮೌಲ್ಯವನ್ನು ಸೇರಿಸಿದೆ ಎಂದು ಹೇಳಬಹುದು.

### ಪರಿಹಾರಕಾರ್ಯಗಳ ಮೂರು ಹಂತಗಳು

**ಪ್ರಾಥಮಿಕ ಪರಿಹಾರ:** ಪ್ರವಾಹ, ಚಂಡಮಾರುತ ಮುಂತಾದ ಸಂದರ್ಭಗಳಲ್ಲಿ ಅಪಘಾತ ಸ್ಥಳದಿಂದ ಜನರನ್ನು ಸಾಗಿಸುವುದೇ ಮೊದಲ ಕೆಲಸವಾಗಿದ್ದರೂ, ಇದನ್ನು ಸಾಮಾನ್ಯವಾಗಿ ಸೈನಿಕರು ಮಾಡುವರು. ಅವರಿಗೆ ಇದಕ್ಕೆ ಬೇಕಾದ ಚತುರತೆ ಮತ್ತು ಸಾಧನಗಳು ಇರುವವು. ಮಿಷನ್ನಿನ ಕೆಲಸ ಸಾಮಾನ್ಯವಾಗಿ ಆಹಾರಪದಾರ್ಥಗಳನ್ನು ವಿತರಿಸುವುದರಿಂದ ಪ್ರಾರಂಭವಾಗುವುದು. ಅದಕ್ಕಾಗಿ ಬಟ್ಟೆ, ಕಂಬಳಿ, ದೀಪ, ಪಾತ್ರೆ ಮುಂತಾದ ನಿತ್ಯೋಪಯೋಗಿ ವಸ್ತುಗಳನ್ನು ನೀಡಲು ಒಂದು ಸರ್ವೇಕ್ಷಣೆ ಮಾಡಬೇಕಾಗುವುದು. ಕೆಲವು ವೇಳೆ ಕೃಷಿಗೆ ಅನುಕೂಲವಾಗುವ ಬೀಜ ಮತ್ತು ಗೊಬ್ಬರವನ್ನು ಕೊಡಲಾಗುವುದು. ಅದು ಕ್ಷಾಮ ಕಾಲವಾದರೆ, ಕುಡಿಯುವ ನೀರು ಮತ್ತು ದನಗಳಿಗೆ ಮೇವನ್ನು ಒದಗಿಸಲಾಗುವುದು. ಅವಘಡದ ನಂತರ ರೋಗಿಗಳು ಹೆಚ್ಚಾಗಿದ್ದರೆ, ವೈದ್ಯಕೀಯ ಸೌಲಭ್ಯ ಒದಗಿಸಲಾಗುವುದು. ಹಾಲು, ಬಿಸ್ಕತ್ ಮತ್ತು ಶಿಶುಗಳ ಆಹಾರವನ್ನು ಮಕ್ಕಳಿಗೆ ಮತ್ತು ಹೊಸ ತಾಯಂದಿರಿಗೆ ಕೊಡಲಾಗುವುದು.

**ಪುನರ್ವಸತಿ:** ದುರ್ಘಟನೆಯಿಂದ ಮನೆಗಳು ಅಪಾರ ಸಂಖ್ಯೆಯಲ್ಲಿ ನಾಶವಾಗಿದ್ದರೆ, ಅತಿ ಹೆಚ್ಚು ಹಾನಿಗೊಳಗಾದವರಿಗೆ ಪುನರ್ವಸತಿ ಕಾರ್ಯವನ್ನು ಯೋಜಿಸಲಾಗುವುದು. ಪ್ರಾರಂಭಿಕ ಪರಿಹಾರ ಹಾಗೂ ಪುನರ್ವಸತಿಗಳು ಸಹಜವಾಗಿ ಲಭ್ಯವಾಗುವ ಹಣ ಮತ್ತು ಸಂನ್ಯಾಸಿಗಳ ಸಂಖ್ಯೆಯನ್ನು ಅವಲಂಬಿಸಿರುತ್ತದೆ. ಹೊಸ ಮನೆಗಳ ಯೋಜನೆಗಳು ಸ್ಥಳದ ಸ್ಥಿತಿಗೆ ಅನುಗುಣವಾಗಿ, ಇಂಜಿನಿಯರುಗಳಿಂದ ತಯಾರಾಗುವುದು. ನಿರ್ಮಾಣದ ವೆಚ್ಚ ಮತ್ತು ಕಾಲವನ್ನು ಕರಾರುವಕ್ಕಾಗಿ ಅಂದಾಜು ಮಾಡಲಾಗುವುದು. ನುರಿತ ಕೆಲಸದವರನ್ನು ನೇಮಿಸಿಕೊಂಡು ಸಂನ್ಯಾಸಿಗಳ ಮೇಲುಸ್ತುವಾರಿಯಲ್ಲಿ ನಿರ್ಮಾಣಕಾರ್ಯ ನಡೆಯುವುದು. ಆ ಸಮಯದಲ್ಲಿ ಸಂನ್ಯಾಸಿಗಳು ಅಲ್ಲಿ ದೊರೆಯಬಹುದಾದ ಖಾಸಗಿ ಅಥವಾ ಸಾರ್ವಜನಿಕ ಕಟ್ಟಡದಲ್ಲಿ ವಾಸಿಸುವರು. ಈ ಕೆಲಸ ಹಲವು ತಿಂಗಳುಗಳು ಅಥವಾ ವರ್ಷಗಳ ಕಾಲ ನಡೆಯುವುದು.

ಯಾರಿಗಾಗಿ ಮನೆಗಳನ್ನು ನಿರ್ಮಾಣ ಮಾಡಲಾಗುವುದೋ ಅವರನ್ನು ಆ ಕಾರ್ಯದಲ್ಲಿ ತೊಡಗಿಸಲೋಸುಗ, 'ನಿಮ್ಮ ಮನೆಯನ್ನು ನೀವು ಕಟ್ಟಿ' ಎಂಬ ಯೋಜನೆಯನ್ನು ರಾಮಕೃಷ್ಣ ಮಿಷನ್ ಕಳೆದ ಕೆಲವು ದಶಕಗಳಿಂದ ಅನುಸರಿಸುತ್ತಿದೆ. ಈ ಯೋಜನೆಯ ಪ್ರಕಾರ ಸಂತ್ರಸ್ತರು ತಮ್ಮ ಮನೆಗಳನ್ನು ತಾವೇ, ಸನ್ನಿವೇಶಕ್ಕೆ ತಕ್ಕಂತೆ, ಕೊಟ್ಟಿರುವ ನಕ್ಷೆಯ ಪ್ರಕಾರ ಕಟ್ಟಬೇಕಾಗುತ್ತದೆ. ಕಟ್ಟಡ ಸಾಮಗ್ರಿ ಮತ್ತು ಆಳುಗಳನ್ನು ಆಯಾ ಹಂತಗಳಲ್ಲಿ ಒದಗಿಸಲಾಗುವುದು. ಈ ಯೋಜನೆಯಲ್ಲಿ ಜನರು ತಮ್ಮ ಮನೆಗಳ ಬಗ್ಗೆ ಆಸಕ್ತಿ ವಹಿಸಿ, ಅಭಿಮಾನದಿಂದ ನಿರ್ಮಾಣಕಾರ್ಯವನ್ನು ಚೆನ್ನಾಗಿ ನೋಡಿಕೊಳ್ಳುವರು. ಈ ರೀತಿಯ ಸತತ ಮೇಲ್ವಿಚಾರಣೆಯಿಂದಾಗಿ ಕಟ್ಟಡ ಸಾಮಗ್ರಿಗಳು ವ್ಯರ್ಥವಾಗುವುದು ಕಡಿಮೆಯಾಗಿ, ನಿರ್ಮಾಣದ ವೆಚ್ಚ ಅತಿ ಕಡಿಮೆ ಆಗುವುದು.

**ಪುನರ್ಪರಿಶೀಲನೆ:** ನಿರ್ಮಾಣ ಮುಗಿದ ಮೇಲೆಯೂ, ಕೆಲವು ಹಳ್ಳಿಗಳಲ್ಲಿ ಸರ್ವಾಂಗ ಬೆಳವಣಿಗೆಯ ದೃಷ್ಟಿಯಿಂದ ಪುನರ್ಪರಿಶೀಲನಾ ಕಾರ್ಯ ಮಾಡಲಾಗುವುದು. ಇದು ಹಣ ಮತ್ತು ಸಮಯದ ಲಭ್ಯತೆಗಳನ್ನು ಅವಲಂಬಿಸಿರುತ್ತದೆ.

**ಆರ್ಥಿಕ ಮೂಲ:** ದೇಶದ ಉದಾರ ಸಾರ್ವಜನಿಕರು ಮತ್ತು ಸಂಸ್ಥೆಗಳು ಮಿಷನ್ನಿನ ಪರಿಹಾರ ಕಾರ್ಯಗಳಿಗೆ ಹಣವನ್ನು ನೀಡುವರು. ಜೊತೆಗೆ ಮಿಷನ್, 'ಪರಿಹಾರ ಭವಿಷ್ಯ ನಿಧಿ' ಯನ್ನೂ ಇಟ್ಟುಕೊಂಡಿದೆ. ಇದರಿಂದ ದೇಶಾದ್ಯಂತ ಅತಿ ಕ್ಷಿಪ್ರವಾಗಿ ಪರಿಹಾರ ಕಾರ್ಯ ನಡೆಸಲು ಸಾಧ್ಯವಾಗುವುದು. ದೊಡ್ಡ ಪ್ರಮಾಣದ ದುರ್ಘಟನೆಗಳಾದಾಗ, ಮಾಧ್ಯಮಗಳ ಮೂಲಕ ಸಹಾಯಧನವನ್ನು ಕೋರಲಾಗುವುದು. ನಿಗದಿತ ಹಣದಿಂದ ಪರಿಹಾರ ಕಾರ್ಯವನ್ನು ಕೈಗೊಳ್ಳಲಾಗುವುದು. ಕೆಲವು ವೇಳೆ ಸರ್ಕಾರವೂ ಧನ ಅಥವಾ ವಸ್ತುರೂಪದಿಂದ ಸಹಾಯ ಮಾಡುತ್ತದೆ.

### ಉಪಸಂಹಾರ:

ಈ ಲೇಖನದಲ್ಲಿ ಕೊಟ್ಟಿರುವ ವಿವರಗಳು ನೂರು ವರ್ಷಗಳಿಗೂ ದೀರ್ಘಕಾಲದಿಂದ ಕೈಕೊಂಡಿರುವ ಪರಿಹಾರ ಕಾರ್ಯಗಳ ಕೆಲವು ತುಣುಕುಗಳು ಮಾತ್ರ. ರಾಮಕೃಷ್ಣ ಮಿಷನ್ನಿನ ಸಾಧುಗಳು ಒಂದು ಸುಸಜ್ಜಿತ ಧಾರ್ಮಿಕ ಸೇನೆಯಂತೆ ಮೌನವಾಗಿ, ಪ್ರಚಾರದಿಂದ ದೂರವಾಗಿ ಈ ಸೇವೆಯನ್ನು ಒಂದು ಶತಮಾನ ಕಾಲಕ್ಕೂ ಮೀರಿ ಮಾಡುತ್ತ ಬಂದಿದ್ದಾರೆ; ನಿಸ್ವಾರ್ಥ ಭಾವನೆಯಿಂದ, ನೊಂದ ಜೀವಿಗಳಿಗೆ, ಅವರ ಧಾರ್ಮಿಕ ಭಾವನೆಗಳಿಗೆ ಭಂಗ ತಾರದೆ ಸಹಾಯಹಸ್ತವನ್ನು ನೀಡುತ್ತಿದ್ದಾರೆ. ಆದರೆ ಈ ಎಲ್ಲ ಸೇವಾಕಾರ್ಯವೂ ಈ ಸಂನ್ಯಾಸಿಗಳ ಆಧ್ಯಾತ್ಮಿಕ ಸಾಧನೆಯ ಒಂದು ಅಂಗ ಮತ್ತು ಮಾರ್ಗ ಮಾತ್ರ. ಈ ಆದರ್ಶವನ್ನು ಅವರ ಮುಂದೆ ಜ್ವಲಂತವಾಗಿ ಇಟ್ಟಿರುವವರು ದಿವ್ಯತ್ರಯರಾದ ಶ್ರೀರಾಮಕೃಷ್ಣರು, ಶ್ರೀಮಾತೆ ಶಾರದಾದೇವಿಯವರು ಮತ್ತು ಸ್ವಾಮಿ ವಿವೇಕಾನಂದರು.



# ಸ್ವಾಮಿ ವಿವೇಕಾನಂದರು ನಿರೂಪಿಸಿದ ನೀತಿಕಥೆಗಳು



ಡಾ. ಕೆ. ಅನಂತರಾಮು

## ತಿರುಗುಬಾಣವಾದ ಪಾದ್ರಿಯ ಬೋಧನೆ

ಈ ಪ್ರಪಂಚವು ಸುಖಮಯವೂ ಅಲ್ಲ, ದುಃಖಮಯವೂ ಅಲ್ಲ; ಎರಡರ ಮಿಶ್ರಣವೆಂಬಂತೆ ತೋರುತ್ತದೆ. ನಾವು ಆ ಕಷ್ಟಸುಖಗಳ ಆಳಕ್ಕೆ ಇಳಿದು ಹೋದಾಗ ಅದಕ್ಕೆಲ್ಲ ನಾವೇ ಹೊಣೆಗಾರರೆಂಬುದು ಮನವರಿಕೆಯಾಗುತ್ತದೆ. ಆಗ ನಾವು ಆಶಾವಾದಿಗಳಾಗುತ್ತೇವೆ. ಅಷ್ಟು ಮಾತ್ರವಲ್ಲದೆ ವೇದಾಂತವು ಕೂಡ ಅದಕ್ಕೊಂದು ಪರಿಹಾರವನ್ನು ತೋರಿಸಿಕೊಡುತ್ತದೆ. ಲೋಕದಲ್ಲಿ ದುಃಖವೇ ಇಲ್ಲ, ದೋಷವೇ ಇಲ್ಲ ಎಂದೇನೂ ವೇದಾಂತವು ಅದನ್ನು ಮರೆಮಾಚಲು ಯತ್ನಿಸುವುದಿಲ್ಲ. ಅದು ಪ್ರಪಂಚದಲ್ಲಿ ಕಂಡುದನ್ನು ಕಂಡಂತೆ ಪರೀಕ್ಷಿಸುತ್ತದೆ. ಅದು ಮಗುವಿನ ಬಾಯಿಗೆ ಬಟ್ಟೆ ತುರುಕಿ ತತ್ಕಾಲಕ್ಕೆ ಅದನ್ನು ಸುಮ್ಮನಾಗಿಸುವ, ವ್ಯಕ್ತಿಗಳ ಕಣ್ಣಿಗೆ ಬಟ್ಟೆಕಟ್ಟಿ ಏನೂ ಕಾಣದಂತೆ ಮಾಡುವ ದುಸ್ಸಾಹಸಕ್ಕೆ ಕೈ ಹಾಕುವುದಿಲ್ಲ.

ಯಾವುದೋ ಒಂದು ಕುಟುಂಬದಲ್ಲಿ ಮನೆಯ ಯಜಮಾನನು ಅಕಾಲ ಮರಣಕ್ಕೆ ತುತ್ತಾದನು. ಅಲ್ಲಿ ನಾಲ್ಕಾರು ಮಕ್ಕಳಿದ್ದರು. ಎಲ್ಲರಿಗಿಂತ ಹಿರಿಯವನು ಇನ್ನೂ ಯುವಕ, ಕಾಲೇಜಿನಲ್ಲಿ ಓದುತ್ತಿದ್ದನು. ಅವನಿಗೆ ತಂದೆ ಸಂಪಾದಿಸಿಟ್ಟ ಆಸ್ತಿಯೇನೂ ಇರಲಿಲ್ಲ. ಈಗ ತಾಯಿಯ ರಕ್ಷಣೆ, ತಮ್ಮಂದಿರ ಪೋಷಣೆ ಮುಂತಾದ ಮನೆಯ ಜವಾಬ್ದಾರಿ ಸಂಪೂರ್ಣವಾಗಿ ಆ ಯುವಕನ ಮೇಲೆಯೇ ಬಿದ್ದಿತು. ಅವನ ತಂದೆಯ ಬಂಧುಗಳಾಗಲಿ, ಸ್ನೇಹಿತರಾಗಲಿ ಯಾರೂ ಸಹಾಯಕ್ಕೆ ಬರಲಿಲ್ಲ. 'ಆರಿಗಾರೂ ಇಲ್ಲ, ಕೆಟ್ಟವಂಗೆ ಕೆಳೆಯಿಲ್ಲ, ಜಗದ ನಂಟ ನೀನೇ ಆಯ್ಯ ಕೂಡಲಸಂಗಮದೇವ' ಎನ್ನುತ್ತಾರಲ್ಲ, ಹಾಗಾಯಿತು ಆ ಯುವಕನ ಪರಿಸ್ಥಿತಿ. ಆಗ ಯುವಕನು ತನಗೆ ಪರಿಚಿತನಾಗಿದ್ದ ಒಬ್ಬ ಪಾದ್ರಿಯ ಬಳಿಗೆ ಹೋದನು. ಅವನು ಗೃಹಸ್ಥನಾಗಿದ್ದನು. ಕೆಲವು ಕ್ರೈಸ್ತ ಪಂಗಡಗಳಲ್ಲಿ ಮದುವೆಯಾದವರು ಪಾದ್ರಿಯಾಗಲು ಏನೂ ಅಡ್ಡಿಯಿಲ್ಲ. ಯುವಕನು ಆ ಪಾದ್ರಿಯ ಬಳಿ ಅನಿರೀಕ್ಷಿತವಾಗಿ ತನಗೆ ಎರಗಿದ ಕಷ್ಟಗಳನ್ನೆಲ್ಲ ಹೇಳಿಕೊಂಡನು. ಅವನಿಂದ ತತ್ಕಾಲಕ್ಕೆ ಏನಾದರೂ ಸಹಾಯ ಒದಗಬಹುದೇನೋ ಎಂದು ಆ ಯುವಕನು ಆಸೆಯಿಟ್ಟುಕೊಂಡಿದ್ದನು. ಆದರೆ ಪಾದ್ರಿಯು ತನ್ನದೇ ಅದ ಶೈಲಿಯಲ್ಲಿ ಉಪದೇಶ ಮಾಡಿದನೇ ಹೊರತು ಸಹಾಯಹಸ್ತವನ್ನೇನೂ ಚಾಚಲಿಲ್ಲ. "ನಿನ್ನ ಮನೆಯ ಪರಿಸ್ಥಿತಿ ಸದ್ಯಕ್ಕೆ ದುಃಖವೆಂದು ತೋರುತ್ತಿದ್ದರೂ ಅದೆಲ್ಲ ನಿನ್ನ ಒಳ್ಳೆಯದಕ್ಕೆಂದೇ ತಿಳಿದುಕೋ. ಅ ದುಃಖದ ಹಿಂದೆ ಒಳ್ಳೆಯದೇ ಇದೆ. ದೇವರು ಮಾಡುವುದೇ ಹಾಗೆ" ಎಂದು ಬೋಧಿಸಿದನು. ಅದು ಗಾಯದ ಮೇಲೆ ಬರೆಯೆಳೆದಂತಾಯಿತೇ ಹೊರತು ಆ ಗಾಯಕ್ಕೆ ಕೈಲಾದ ಉಪಚಾರ ಮಾಡುವ ಉಪಕ್ರಮವಾಗಲಿಲ್ಲ. ಅದು ಗಾಯದ ಮೇಲೆ ಚಿನ್ನದ ರೇಕುಗಳನಿಟ್ಟು ಮುಚ್ಚಿಬಿಡುವ ಕಾರ್ಯದಂತೆ ಆಯಿತು. ಮನಸ್ಸಿನಲ್ಲಿ ದಯೆಯಿಲ್ಲದವನ ಕಣ್ಣು ಕಣ್ಣಲ್ಲ, ಅದು ಹುಣ್ಣಿಗೆ ಸಮ. ಯುವಕನು ನಿರಾಶನಾಗಿ ಹೊರಟುಹೋದನು. ಲೋಕವು ಯಾರನ್ನು ತಾನೇ ನೆಚ್ಚಿಕೊಂಡು ನಡೆಯುತ್ತದೆ ! ಯುವಕನು ಹೇಗೋ ಬದುಕಿನ ಬಂಡಿಯನ್ನು ಎಳೆಯುತ್ತಿದ್ದನು.

ಹೀಗೆಯೇ ಆರು ತಿಂಗಳು ಕಳೆಯಿತು. ಪಾದ್ರಿಗೊಂದು ಗಂಡು ಮಗು ಹುಟ್ಟಿತು. ಅದಕ್ಕಾಗಿ ಅವನೊಂದು ಸಂತೋಷಕೂಟವನ್ನು ಏರ್ಪಡಿಸಿಕೊಂಡು, ತನಗೆ ಬೇಕಾದವರನ್ನೆಲ್ಲಾ ಆಹ್ವಾನಿಸಿದನು. ಆ ಸಮಾರಂಭಕ್ಕೆ ಪಾದ್ರಿಯು ಈ ಯುವಕನನ್ನೂ ಬರಮಾಡಿಕೊಂಡನು. ಆ ಹೊತ್ತಿನಲ್ಲಿ ಪಾದ್ರಿಯು, "ದೇವರು ಕೃಪಾಳುವಾಗಿದ್ದಾನೆ, ನನಗೊಂದು ಮುದ್ದಾದ ಮಗುವನ್ನು ದಯಪಾಲಿಸಿದ್ದಾನೆ. ಅದರಿಂದ ನನಗೆ ಬಹಳ ಸಂತೋಷವಾಗಿದೆ. ಅದಕ್ಕಾಗಿ ಆ ದೇವರಿಗೆ ನನ್ನ ಕೃತಜ್ಞತೆಗಳನ್ನು ಸಮರ್ಪಿಸುತ್ತಿದ್ದೇನೆ... ಈ ಸಮಾರಂಭಕ್ಕೆ ಆಗಮಿಸಿದ ನಿಮಗೂ ಧನ್ಯವಾದಗಳು" ಎಂದು ಪುಟ್ಟದೊಂದು ಭಾಷಣ ಮಾಡಿದನು.

ಆಗ ಯುವಕನು ಎದ್ದುನಿಂತು, "ಅಯ್ಯಾ ಪಾದ್ರಿಗಳೇ, ನಿಮ್ಮ ಮನೆಯಲ್ಲಿ ಈಗ ನಡೆದಿರುವ ಘಟನೆ ಸುಖಕರವಾದುದ್ದೆಂದು ಹೇಗೆ ಹೇಳುತ್ತೀರಿ? ಇದು ದುಃಖಕರವೇ ಅಲ್ಲವೇ" ಎಂದು ಪ್ರಶ್ನಿಸಿದನು. ಆ ಮಾತು ಕೇಳಿ ಪಾದ್ರಿಯು ಅವಕ್ಕಾದನು. ಸ್ವಲ್ಪ ಸಾವರಿಸಿಕೊಂಡು, "ಹೇಗೆ ದು:ಖಕರ?" ಎಂದು ಕೇಳಿದನು. "ನಾನು ಈ ಮೊದಲು ನಿಮ್ಮಲ್ಲಿಗೆ ಬಂದು ನಮ್ಮ ತಂದೆಯ ಮರಣದ ಸಂಕಟವನ್ನೆಲ್ಲ ತೋಡಿಕೊಂಡಾಗ, 'ಹೊರಗಿನ ತೋರಿಕೆಗೆ ಮಾತ್ರ ಈ ಘಟನೆ ದುಃಖವೆಂಬಂತೆ ಭಾಸವಾಗುತ್ತಿದೆ. ಆದರೆ ಸತ್ಯವಾಗಿ ಅದರ ಹಿಂದೆ ಸುಖವೇ ಇದೆ' ಎಂಬ ಅರ್ಥದ ಮಾತು ಹೇಳಿದಿರಿ. ಈಗ ನಿಮ್ಮ ಮನೆಯಲ್ಲಿ ಗಂಡುಮಗು ಹುಟ್ಟಿರುವುದು ಕೂಡ ಹೊರಗಿನ ತೋರಿಕೆಗೆ ಮಾತ್ರ ಸುಖ, ಅದರೆ ಸತ್ಯವಾಗಿ ಅದರ ಹಿಂದೆ ದುಃಖವೇ ಇದೆ ಎಂದು ಹೇಳಬಹುದಲ್ಲವೇ" ಎಂದು ವಿವರಿಸಿದನು. ತನ್ನ ಬೋಧನೆಯು ತನಗೇ ತಿರುಗುಬಾಣವಾದುದಕ್ಕೆ ಪಾದ್ರಿಯ ಮುಖ ಚಿಕ್ಕದಾಯಿತು.

ಸ್ವಾಮಿ ವಿವೇಕಾನಂದರು ಈ ಕಥೆಯನ್ನು ಮುಂದಿಟ್ಟುಕೊಂಡು ಪಾದ್ರಿಯ ದೃಷ್ಟಿಯಿಂದ ಮತ್ತು ಯುವಕನ ದೃಷ್ಟಿಯಿಂದ ಎಂಬಂತೆ – ಎರಡು ಆಯಾಮಗಳಲ್ಲಿ ನೀತಿಬೋಧೆ ಮಾಡಿದ್ದಾರೆ. "ನೀವು ಒಳ್ಳೆಯವರಾಗಿ. ಆದರೆ ಗಾಯವನ್ನು ಚಿನ್ನದ ರೇಕುಗಳಿಂದ ಮುಚ್ಚುವ ಹುಚ್ಚುತನದ ಕಾರ್ಯವನ್ನು ಮಾಡಬೇಡಿ. ದುಃಖಿಸುವವರ ವಿಷಯದಲ್ಲಿ ದಯಾವಂತರಾಗಿ" ಎಂದು ಪಾದ್ರಿಯ ಸ್ವಭಾವದ ಮನುಜರಿಗೆ ಉಪದೇಶಿಸಿದ್ದಾರೆ. ಯುವಕನನ್ನು ಕೇಂದ್ರವಾಗಿಟ್ಟುಕೊಂಡು ವೇದಾಂತದ ಬಲದಿಂದ ಕಷ್ಟಗಳನ್ನು ಎದುರಿಸುವುದು ಹೇಗೆ ಎಂಬುದನ್ನೂ ತಿಳಿಯಹೇಳಿದ್ದಾರೆ. ಈ ಜಗತ್ತು ಒಳ್ಳೆಯದು ಮತ್ತು ಕೆಟ್ಟದ್ದು ಎಂಬ ಎರಡೂ ಸಂಗತಿಗಳ ಮಿಶ್ರಣವಾಗಿದೆ. ಈ ಒಳ್ಳೆಯದು ಮತ್ತು ಈ ಕೆಟ್ಟದ್ದರ ಹಿಂದೆ ಆತ್ಮರೆನಿಸಿದ ನಾವೇ ಇದ್ದೇವೆ. ನಾವು ಬಂಧನಕ್ಕೆ ಒಳಗಾದವರಲ್ಲ. ಪ್ರಕೃತಿಯ ದಾಸರೂ ಅಲ್ಲ. ನಾವು ಸೂರ್ಯಚಂದ್ರನಕ್ಷತ್ರಾದಿಗಳನ್ನೆಲ್ಲ ಮೀರಿದವರಾಗಿದ್ದೇವೆ ಎಂದು ಭಾವಿಸಿದರೆ, ಒಳ್ಳೆಯದು ಮತ್ತು ಕೆಟ್ಟದ್ದು ಎಂಬ ದ್ವಂದ್ವವನ್ನು ನಿಗ್ರಹಿಸಲು ಸಮರ್ಥರಾಗುತ್ತೇವೆ. ಆಗ ನಮಗೆ, "ಒಳ್ಳೆಯದು ಎಷ್ಟು ಆಪ್ಯಾಯಮಾನವಾಗಿದೆ, ಕೆಟ್ಟದ್ದು ಸಹ ಎಷ್ಟು ಅದ್ಭುತವಾಗಿದೆ" ಎಂದು ಹೇಳುವಷ್ಟು ಧೈರ್ಯ ಉಕ್ಕಿಬರುತ್ತದೆ. ಈ ಬದುಕು ಕಠಿಣವೆಂಬುದು ಸತ್ಯ. ಆದರೆ ಆ ಕಠಿಣತೆಯ ಮೂಲಕವೇ ಧೀರರಾಗಿ ಸುಖದ ಮಾರ್ಗವನ್ನು ಕಂಡುಕೊಳ್ಳಬೇಕಾಗಿದೆ.

ಕಥೆ : ರೇವತಿ

ಚಿತ್ರ : ಮಣಿಯಮ್ ಸೆಲ್ವನ್

# ಕೃಷ್ಣನ ಅನುಗ್ರಹವನ್ನು ಪಡೆದುಕೊಂಡ ಸುಲ್ತಾನ

1 ಸುಲ್ತಾನ ಎನ್ನುವವನು ಜೈಪುರದಲ್ಲಿ ವಾಸಿಸುತ್ತಿದ್ದ ಒಬ್ಬ ಬಡಹುಡುಗ. ಒಂದು ದಿನ...




2 ಸುಲ್ತಾನನು ರಾಜನ ಹತ್ತಿರ ಹೋಗಿ ಕೆಲಸಕ್ಕಾಗಿ ಕೇಳಿಕೊಂಡನು.




3 ಒಮ್ಮೆ ರಾಜನು ಶ್ರೀಕೃಷ್ಣ ದೇವಾಲಯಕ್ಕೆ ಹೋಗಿ, ನಮಸ್ಕಾರ ಮಾಡಿದನು.



4



**5** ಸುಲ್ತಾನನು ಶ್ರೀಕೃಷ್ಣ ದೇವಸ್ಥಾನದ ಬಾಗಿಲನ್ನು ಕಾಯಲು ಆರಂಭಿಸಿದನು. ನಿಧಾನವಾಗಿ ಶ್ರೀಕೃಷ್ಣನ ಬಗ್ಗೆ ಹೆಚ್ಚು ಹೆಚ್ಚು ವಿಚಾರಗಳನ್ನು ತಿಳಿದುಕೊಂಡನು.




ದಿನದಿನಕ್ಕೆ ಸುಲ್ತಾನನ ಭಕ್ತಿಯು ಬೆಳೆಯುತ್ತ ಹೋಯಿತು. ಅವನು ಶ್ರೀಕೃಷ್ಣನ ದರ್ಶನಕ್ಕಾಗಿ ಹೆಚ್ಚು ಹೆಚ್ಚು ತವಕಪಡಲಾರಂಭಿಸಿದನು.

**6** ಕೆಲವು ವರ್ಷಗಳ ನಂತರ,




**7**

ಇಡೀ ರಾತ್ರಿ ಭಗವಂತನು ಗೋಪಿಯರ ಜೊತೆಗೆ ರಾಸಲೀಲೆಯಾಡಿದನು.

ದೇವಾ! ನೀನು ಈ ರೀತಿ ಸತತವಾಗಿ ನೃತ್ಯಮಾಡಿದರೆ, ನಿನ್ನ ಕಾಲುಗಳಿಗೆ ನೋವುಂಟಾಗ ಲಾರದೇನು? ದಯವಿಟ್ಟು ಸ್ವಲ್ಪ ವಿಶ್ರಾಂತಿ ತೆಗೆದುಕೋ.


8
ನಿಧಾನವಾಗಿ ಬೆಳಗಾಯಿತು. ಸುಲ್ತಾನನು ತನ್ನ ದೈನಂದಿನ ಕರ್ತವ್ಯಗಳಲ್ಲಿ ಮಗ್ನನಾದನು. ಅಷ್ಟುಹೊತ್ತಿಗೆ, ಭಗವಂತನಿಗೆ ಸುಪ್ರಭಾತ ಕೋರಲು, ಭಗವಂತನ ಕೀರ್ತನೆಯನ್ನು ಹಾಡುತ್ತ ಗಾಯಕರು ಬಂದರು.
ಸ್ವಾಮಿ, ದಯವಿಟ್ಟು ಹಾಡುಗಳನ್ನು ಈಗ ಹಾಡಬೇಡಿ. ಆಮೇಲೆ ಹಾಡುವಿರಂತೆ.
ಇಲ್ಲ ಸ್ವಾಮಿ. ಇಡೀ ರಾತ್ರಿ ಭಗವಂತನು ನೃತ್ಯಮಾಡುತ್ತಿದ್ದನು. ಅವನಿಗೆ ಶ್ರಮವಾಗಿದೆ. ಈಗತಾನೇ ಅವನು ನಿದ್ರಿಸಲು ತೆರಳಿದ್ದಾನೆ.
ಕೀರ್ತನೆಯನ್ನು ಮುಂದೂಡಲಾಗದು.
ಈಗಾಗಲೇ ಬೆಳಗಾಗಿದೆ. ಈಗಲ್ಲದೆ ಸುಪ್ರಭಾತದ ಹಾಡುಗಳನ್ನು ಇನ್ನು ಯಾವಾಗ ತಾನೇ ಹಾಡುವುದು?


9
ನೀನು ಏಕೆತಾನೇ ನಮ್ಮನ್ನು ಅಡ್ಡಿಪಡಿಸುತ್ತಿದ್ದೀಯೇ?
ಭಗವಂತನ ನಿದ್ದೆಯನ್ನು ಕೆಡಿಸಬಾರದು. ನಡೆಯಿರಿ, ನಡೆಯಿರಿ.
ಇವನು ದೇವರ ನರ್ತನವನ್ನು ನೋಡಿದನಂತೆ! ಪ್ರಾತಃಕಾಲದ ಪಾರಾಯಣ ನಡೆಯದಿದ್ದರೆ ನಮಗೆ ಪಾಪ ಬರುತ್ತದೆ. ದೇವಸ್ಥಾನದ ಅಧಿಕಾರಿಗಳಿಗೆ ದೂರು ಕೊಡೋಣ.


10
ಸುಲ್ತಾನ, ಈ ಜನರು ಹೇಳುತ್ತಿರುವುದು ನಿಜವೇನು?
ಹೌದು, ಸ್ವಾಮಿ. ಭಗವಂತನು ನನಗೆ ದರ್ಶನವನ್ನು ಕೊಟ್ಟನು. ಈಗತಾನೇ ಅವನು ವಿಶ್ರಾಂತಿಗೆ ಹೋಗಿದ್ದಾನೆ. ಅವನನ್ನು ಯಾವಕಾರಣಕ್ಕೂ ನಾನು ಎಬ್ಬಿಸುವುದಿಲ್ಲ.
ದಯವಿಟ್ಟು ನನ್ನನ್ನು ನಂಬಿ. ಭಗವಂತನು ನರ್ತನ ಮಾಡುತ್ತಿದ್ದಾಗ, ಅವನ ಕಾಲಿನ ಬಳೆಗಳು ಮತ್ತು ಗೆಜ್ಜೆಗಳು ಸಡಿಲವಾದುವು. ಅವು ಇಲ್ಲಿವೆ.
ಸುಳ್ಳು, ಸುಳ್ಳು.
ಹೌದು. ಇವು ಭಗವಂತನ ಆಭರಣಗಳೇ ಸರಿ. ನೋಡಿ. ಅವುಗಳು ಮರಳಿನಿಂದ ಕೊಳೆಯಾಗಿವೆ.


11
ಅಷ್ಟುಹೊತ್ತಿಗೆ ಪೂಜಾರಿ ತವಕದಿಂದ ಪ್ರವೇಶಿಸಿದನು.
ನೋಡಿ, ಇವೇಯೇನು?
ಸ್ವಾಮಿ, ಭಗವಂತನ ವಿಗ್ರಹದ ಕಾಲ್ಗೆಜ್ಜೆ ಮತ್ತು ಬಳೆಗಳು ಕಾಣೆಯಾಗಿವೆ.
ಹೌದು, ಇವು ಭಗವಂತನಿಗೆ ಸೇರಿದ್ದು.

**12** ಭಗವಂತನ ಅನುಗ್ರಹದಿಂದ, ಅಧಿಕಾರಿಗಳಿಂದ ಮೊದಲುಗೊಂಡು ಎಲ್ಲರೂ ಸುಲ್ತಾನನ ಮಾತನ್ನು ನಂಬಿದರು.




ಸುಲ್ತಾನನ ಭಕ್ತಿಯ ಕೀರ್ತಿ ರಾಜ್ಯದಾದ್ಯಂತ ಹರಡಿತು. ರಾಜರು ಮತ್ತು ಸಾಮಾನ್ಯ ಜನರು ಸುಲ್ತಾನನ ದರ್ಶನಕ್ಕಾಗಿ ಮುತ್ತಿದರು.

**13** ಆದರೆ ಸುಲ್ತಾನನು ಇದರಿಂದ ಗರ್ವಗೊಳ್ಳದೆ, ಭಗವಂತನನ್ನು ಪ್ರಾರ್ಥಿಸುತ್ತಲೇ ಇದ್ದನು.




**14** ಒಂದು ದಿನ

ಓ ಕೃಷ್ಣ! ಪರಮಾತ್ಮ! ನನ್ನನ್ನು ದಯವಿಟ್ಟು ಒಪ್ಪಿಸಿಕೋ!

ಸುಲ್ತಾನನು ಭಗವಂತನೊಡನೆ ಐಕ್ಯವಾಗಿಬಿಟ್ಟನು. ಭಗವಂತನನ್ನು ಪೂರ್ಣಭಕ್ತಿಯಿಂದ ಆರಾಧಿಸಿದವನು ಅವನೊಬ್ಬನೇ.

ಹೀಗೆ ಸುಲ್ತಾನನು ನೈಜಭಕ್ತಿಗೆ ಆದರ್ಶವಾಗಿದ್ದಾನೆ.

ಸುದ್ದಿ ಸಂಚಯ

# ರಾಮಕೃಷ್ಣ ಮಿಷನ್ ಆಡಳಿತ ಮಂಡಳಿಯ ಸಂಕ್ಷಿಪ್ತ ವಾರ್ಷಿಕ ವರದಿ : ೨೦೧೨–೧೩

**ರಾ**ಮಕೃಷ್ಣ ಮಿಷನ್ ಆಡಳಿತ ಮಂಡಳಿಯ ೧೦೨ನೇ ವಾರ್ಷಿಕ ಸರ್ವಸದಸ್ಯರ ಸಭೆಯು ೨೦೧೩ರ ಡಿಸೆಂಬರ್ ೧೫, ಭಾನುವಾರದಂದು ಮಧ್ಯಾಹ್ನ ೩:೩೦ಕ್ಕೆ ಬೇಲೂರು ಮಠದಲ್ಲಿ ಜರುಗಿತು.

ಚೆನ್ನೈನ ಭಗವಾನ್ ಮಹಾವೀರ ಫೌಂಡೇಷನ್ ಅವರು ನಮ್ಮ **ಇಟಾನಗರ** ಆಸ್ಪತ್ರೆಗೆ ಸಮುದಾಯ ಮತ್ತು ಸಾಮಾಜಿಕ ಸೇವಾಕ್ಷೇತ್ರದಲ್ಲಿನ ಉತ್ಕೃಷ್ಟತೆಗಾಗಿ ೧೫ನೇ ಮಹಾವೀರ ಪ್ರಶಸ್ತಿಯನ್ನು ಪ್ರದಾನ ಮಾಡಿದ್ದಾರೆ. ಹಾಗೆಯೇ **ಛತ್ತೀಸ್‌ಘರ್** ರಾಜ್ಯ ಸರ್ಕಾರವು ೨೦೧೨ನೇ ಸಾಲಿನ ಡಾ. ಭನ್ವರ್‌ಸಿಂಗ್ ಪೋರ್ಟೆ ಸ್ಮಾರಕ ಬುಡಕಟ್ಟು ಜನಾಂಗದವರ ಸೇವೆಗಾಗಿನ ಪ್ರಶಸ್ತಿಯನ್ನು ನಮ್ಮ **ನಾರಾಯಣಪುರ** ಕೇಂದ್ರಕ್ಕೆ ಕೊಡಮಾಡಿದೆ.

**ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿ ಮಹೋತ್ಸವ:** ಭಾರತ ಸರ್ಕಾರದ ಸಂಸ್ಕೃತಿ ಇಲಾಖೆಯು ಸ್ವಾಮಿ ವಿವೇಕಾನಂದರ ೧೫೦ನೇ ಜಯಂತಿ ಮಹೋತ್ಸವದ ಉದ್ಘಾಟನಾ ಸಮಾರಂಭವನ್ನು ೨೦೧೩ರ ಜನವರಿ ೧೨ ರಂದು ರಾಷ್ಟ್ರಪತಿ ಭವನದಲ್ಲಿ ಏರ್ಪಡಿಸಿತ್ತು. ಸೆಂಟ್ರಲ್ ಬೋರ್ಡ್ ಆಫ್ ಸೆಕೆಂಡರಿ ಎಜುಕೇಷನ್ (ಸಿ.ಬಿ.ಎಸ್.ಇ) ರಾಮಕೃಷ್ಣ ಮಿಷನ್ನಿನ ಕಡೆಯಿಂದ ನಡೆಯುತ್ತಿರುವ ಆರು ಶಾಲೆಗಳೂ ಸೇರಿ, ಬೋರ್ಡ್‌ಗೆ ಒಳಪಟ್ಟ ೪೦ ಶಾಲೆಗಳಿಗೆ **'ವಿವೇಕಾನಂದ ಉತ್ಕೃಷ್ಟ ಶಾಲಾ ಪ್ರಶಸ್ತಿ'** ಯನ್ನು ನೀಡಿದೆ. ಮಹೋತ್ಸವದ ಅಂಗವಾಗಿ ೨೦೧೦ರಲ್ಲಿ ಆರಂಭಗೊಂಡ, ಕೇಂದ್ರಸರ್ಕಾರ ಪ್ರಾಯೋಜಿತ ಸೇವಾಕಾರ್ಯಗಳು ಇನ್ನೂ ಮುಂದುವರೆದಿದ್ದು, ೮.೧೦.೨೦೧೦ರಿಂದ ಹಿಡಿದು ೩೦.೬.೨೦೧೩ರವರೆಗೆ ಅವುಗಳಿಗಾಗಿ ಒಟ್ಟಾರೆ ೫೧.೭೭ ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಾಗಿದೆ.

ಈ ವರ್ಷದಲ್ಲಿ ಮಿಷನ್ನಿನ ಕಡೆಯಿಂದ ಒಡಿಸಾ ರಾಜ್ಯದ **ಕೊಥಾರ್**‌ನಲ್ಲಿ ಒಂದು ಹೊಸ ಕೇಂದ್ರವನ್ನು ಆರಂಭಿಸಲಾಯಿತು. ಭಾರತದ ಹೊರಗಡೆ, ನೇಪಾಲದ **ಕಟ್ಮಂಡು** ಹಾಗೂ ಬಾಂಗ್ಲಾ ದೇಶದ **ಬಗೇರ್‌ಹಾಟ್** ಮತ್ತು **ಮೈಮೆನ್ಸಿಂಗ್**‌ಗಳಲ್ಲಿ ನೂತನ ಮಿಷನ್ ಕೇಂದ್ರಗಳು ಸ್ಥಾಪನೆಗೊಂಡವು. ರಾಮಕೃಷ್ಣ ಮಠದ ನೂತನ ಶಾಖೆಯೊಂದನ್ನು ಬಾಂಗ್ಲಾದೇಶದ **ಕೊಮಿಲ್ಲಾ** ಎಂಬ ಸ್ಥಳದಲ್ಲಿ ಆರಂಭಿಸಲಾಗಿದೆ. ಇದಲ್ಲದೆ ರಾಮಕೃಷ್ಣ ಮಠ ಮತ್ತು ಮಿಷನ್ನಿನ ಸಂಯುಕ್ತ ಶಾಖೆಯನ್ನು ಬಾಂಗ್ಲಾದೇಶದ **ಜೆಸ್ಸೂರಿನಲ್ಲಿ** ಸ್ಥಾಪಿಸಲಾಗಿದೆ. ಫಿಜಿ ದೇಶದಲ್ಲಿ ನಮ್ಮ ನಾಡಿ ಕೇಂದ್ರದ ಉಪಕೇಂದ್ರವೊಂದು **ಸುವಾ** ಎನ್ನುವ ಊರಿನಲ್ಲಿ ಪ್ರಾರಂಭಗೊಂಡಿದೆ.

**೧. ಶೈಕ್ಷಣಿಕ ಕ್ಷೇತ್ರ :** ೧) ನಮ್ಮ **ನರೇಂದ್ರಪುರ** ಕಾಲೇಜು National Assessment and Accreditation Council (NAAC) ಸಂಘಟನೆಯ ವತಿಯಿಂದ 'A- Grade' (ಅತ್ಯುಚ್ಚ ಶ್ರೇಣಿ) ಪಡೆದಿದೆ. ೨) **ಚೆನ್ನೈ ಸ್ಟೂಡೆಂಟ್ ಹೋಮಿನ ಪಾಲಿಟೆಕ್ನಿಕ್ ಕಾಲೇಜಿಗೆ** NIQR-TVN Kidao outstanding Educational Institution ಪ್ರಶಸ್ತಿ ಬಂದಿದೆ. ೩) **ರಹರಾದ ಸ್ವಾಮಿ ವಿವೇಕಾನಂದ ಸೆಂಟನರಿ ಕಾಲೇಜಿನಲ್ಲಿ** ಎಂ.ಎಸ್.ಸಿ. ಬಾಟನಿ ಕೋರ್ಸ್ ಅನ್ನು ಆರಂಭಿಸಲಾಗಿದೆ. **೨. ವೈದ್ಯಕೀಯ ಕ್ಷೇತ್ರ :** ೧) **ಲಖನೌ** ಆಸ್ಪತ್ರೆಯಲ್ಲಿ ಹಲವಾರು ನೂತನ ವೈದ್ಯಕೀಯ ಸಲಕರಣೆಗಳನ್ನು ಸ್ಥಾಪಿಸಲಾಗಿದೆ. ೨) **ವಾರಾಣಸಿ ಸೇವಾಶ್ರಮದ ಆಸ್ಪತ್ರೆಯಲ್ಲಿ** ೮ ಹಾಸಿಗೆಗಳುಳ್ಳ High dependency Unit ಅನ್ನು ಆರಂಭಿಸಲಾಗಿದೆ. ೩. **ಸಾರಗಾಚಿಯ** ಔಷಧಾಲಯದಲ್ಲಿ ಹಲವಾರು ವೈದ್ಯಕೀಯ ಸೌಲಭ್ಯಗಳನ್ನು ನೂತನವಾಗಿ ಒದಗಿಸಲಾಗಿದೆ. ೪. ನಮ್ಮ **ಇಟಾನಗರ ಆಸ್ಪತ್ರೆಯ** ಪ್ರಯೋಗಶಾಲೆಯಲ್ಲಿ ಹಲವು ನೂತನ ಉಪಕರಣಗಳನ್ನು ಅಳವಡಿಸಲಾಗಿದೆ. **೩. ಗ್ರಾಮೀಣಾಭಿವೃದ್ಧಿ ಕ್ಷೇತ್ರ :** ೧) **ನಾರಾಯಣಪುರ** ಕೇಂದ್ರದ ವತಿಯಿಂದ ತಾಂತ್ರಿಕ ತರಬೇತಿ ಕೇಂದ್ರದ ಸ್ಥಾಪನೆ ೨) **ಸಾರಗಾಚಿ** ಕೇಂದ್ರದ ವತಿಯಿಂದ ಕೌಶಲ್ಯಗಳ ಅಭಿವೃದ್ಧಿ ಕೇಂದ್ರದ ಪ್ರಾರಂಭ.

**ರಾಮಕೃಷ್ಣ ಮಠಕ್ಕೆ ಸಂಬಂಧಿಸಿದಂತೆ ಈ ನೂತನ ಯೋಜನೆಗಳು ಗಮನಾರ್ಹ :** ೧) **ಕೊಲ್ಕತಾದ ಬಲರಾಮ ಮಂದಿರ**ದಲ್ಲಿ 'ಶ್ರೀರಾಮಕೃಷ್ಣ ದಿವ್ಯ ಲೀಲಾ ಪ್ರದರ್ಶನಿ'ಯ ಉದ್ಘಾಟನೆ ೨) **ಪುಣೆಯ ಕ್ಲಿನಿಕ್**‌ನಲ್ಲಿ Fully Automatic Biochemistry Analyzer ಮತ್ತು Dental Chair ಗಳ ಅಳವಡಿಕೆ ೩) **ಪೊನ್ನಂಪೇಟೆಯ** ಕೇಂದ್ರದಿಂದ ಗ್ರಾಮೀಣ ಬುಡಕಟ್ಟು ಜನಾಂಗದವರ ಬಗ್ಗೆ ವಿಚಾರಸಂಕಿರಣ.

**ಭಾರತದ ಹೊರಗೆ ಈ ಹೊಸ ಬೆಳವಣಿಗೆಗಳು ಉಲ್ಲೇಖಾರ್ಹ :** ೧) ಶ್ರೀಲಂಕಾದ ಕೊಲಂಬೋ ಕೇಂದ್ರದ ಉಪಕೇಂದ್ರವಾದ **ಬಟ್ಟಿಕಲೋವಾ**ದಲ್ಲಿ ಬಾಲಕರ ನಿವಾಸದ ಅಧ್ಯಯನ ಕೊಠಡಿ ಮತ್ತು ಶ್ರೀಶಾರದಾ ನರ್ಸರಿ ಶಾಲೆಯ ಕಟ್ಟಡದ ನಿರ್ಮಾಣ ೨) ಬಾಂಗ್ಲಾದೇಶದ **ಬಲಿಯಾಟಿ** ಕೇಂದ್ರದಲ್ಲಿ ಸಾಧುನಿವಾಸ ಮತ್ತು ಔಷಧಾಲಯ ಕಟ್ಟಡಗಳ ನಿರ್ಮಾಣ ೩) ಅಮೆರಿಕದ **ಪ್ರಾವಿಡೆನ್ಸ್** ಕೇಂದ್ರದಲ್ಲಿ ನೂತನ ಪೂಜಾಗೃಹದ ನಿರ್ಮಾಣ.

**೨೦೧೨–೧೩ ರ ಸಾಲಿನ ಸೇವಾಕಾರ್ಯಗಳ ಒಟ್ಟು ಸಾರಾಂಶ : ೧. ಪರಿಹಾರ ಮತ್ತು ಪುನರ್ವಸತಿ :** ಪ್ರಸಕ್ತ ಸಾಲಿನಲ್ಲಿ ರಾಮಕೃಷ್ಣ ಮಠ ಮತ್ತು ರಾಮಕೃಷ್ಣ ಮಿಷನ್ ದೇಶದ ವಿವಿಧ ಭಾಗಗಳಲ್ಲಿ ಬೃಹತ್ ಪ್ರಮಾಣದ ಪರಿಹಾರ ಹಾಗೂ ಪುನರ್ವಸತಿ ಕಾರ್ಯಗಳನ್ನು ನಡೆಸಿದೆ. ೨.೨೬ ಕೋಟಿ ರೂಪಾಯಿಗಳ ವೆಚ್ಚದಲ್ಲಿ ಕೈಗೊಂಡ ಯೋಜನೆಗಳಿಂದ ೪೧೫ ಗ್ರಾಮಗಳ, ೧ ಲಕ್ಷ ಕುಟುಂಬಗಳ, ೪.೯೪ ಲಕ್ಷ ಜನರು ನೆರವನ್ನು ಪಡೆದಿದ್ದಾರೆ. **೨. ಸಮಾಜ ಕಲ್ಯಾಣ ಕಾರ್ಯಕ್ರಮಗಳು:** ಸಮಾಜ ಕಲ್ಯಾಣ ಕಾರ್ಯಕ್ರಮಗಳಿಗೆ ೧೧.೫೫ ಕೋಟಿ ರೂಪಾಯಿಗಳನ್ನು ವಿನಿಯೋಗಿಸಲಾಗಿದೆ. ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ, ವೃದ್ಧರು, ರೋಗಿಗಳು ಹಾಗೂ ನಿರ್ಗತಿಕರಿಗೆ ಆರ್ಥಿಕ ನೆರವನ್ನು ಈ ಯೋಜನೆಯಡಿಯಲ್ಲಿ ನೀಡಲಾಗಿದೆ. ಸುಮಾರು ೩೬.೩೦ ಲಕ್ಷ ಫಲಾನುಭವಿಗಳು ಇದರ ಪ್ರಯೋಜನವನ್ನು ಪಡೆದುಕೊಂಡಿದ್ದಾರೆ. **೩. ವೈದ್ಯಕೀಯ ಸೇವೆಗಳು :** ವೈದ್ಯಕೀಯ ಸೇವೆಗಳಿಗಾಗಿ ೧೪೬.೩೭ ಕೋಟಿ ರೂಪಾಯಿಗಳನ್ನು ವಿನಿಯೋಗಿಸಲಾಗಿದೆ. ಈ ಯೋಜನೆಗಳ ಅಡಿಯಲ್ಲಿ ೧೫ ಆಸ್ಪತ್ರೆಗಳು, ೧೨೫ ಚಿಕಿತ್ಸಾಲಯಗಳು, ೬೦ ಸಂಚಾರಿ ವೈದ್ಯಕೀಯ ಘಟಕಗಳು ಮತ್ತು ೯೫೩ ವೈದ್ಯಕೀಯ ಶಿಬಿರಗಳ ಮೂಲಕ ಸುಮಾರು ೮೦. ೨೦ ಲಕ್ಷ ಜನರಿಗೆ ವೈದ್ಯಕೀಯ ಸೇವೆಯನ್ನು ಒದಗಿಸಲಾಗಿದೆ. **೪. ಶೈಕ್ಷಣಿಕ ಕಾರ್ಯಕ್ರಮಗಳು:** ಶೈಕ್ಷಣಿಕ ಕಾರ್ಯಕ್ರಮಗಳಿಗೆ ಒಟ್ಟು ೨೫೧. ೮೮ ಕೋಟಿ ರೂಪಾಯಿಗಳನ್ನು ವಿನಿಯೋಗಿಸಲಾಗಿದೆ. ಶಿಶುವಿಹಾರದಿಂದ ವಿಶ್ವವಿದ್ಯಾನಿಲಯದವರೆಗೆ ಇರುವ ನಮ್ಮ ಹಲವಾರು ವಿದ್ಯಾಸಂಸ್ಥೆಗಳಲ್ಲಿ ಸುಮಾರು ೩. ೨೯ ಲಕ್ಷ ವಿದ್ಯಾರ್ಥಿ ವಿದ್ಯಾರ್ಥಿನಿಯರು ಶಿಕ್ಷಣ ಪಡೆದಿದ್ದಾರೆ. **೫. ಗ್ರಾಮೀಣಾಭಿವೃದ್ಧಿ ಮತ್ತು ಬಡಕಟ್ಟು ಜನಾಂಗದವರ ಕಲ್ಯಾಣ ಕಾರ್ಯಕ್ರಮಗಳು :** ಗ್ರಾಮೀಣ ಹಾಗೂ ಬುಡಕಟ್ಟು ಜನಾಂಗದವರಿಗಾಗಿ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ೪೨. ೬೭ ಲಕ್ಷ ಜನರು ಇದರ ಪ್ರಯೋಜನವನ್ನು ಪಡೆದುಕೊಂಡಿದ್ದಾರೆ. ಇದಕ್ಕೆ ಖರ್ಚು ಮಾಡಿದ ಮೊತ್ತ ೪೧ . ೨೬ ಕೋಟಿ ರೂಪಾಯಿಗಳು. ಈ ಸಂದರ್ಭದಲ್ಲಿ ರಾಮಕೃಷ್ಣ ಮಿಷನ್ನಿನ ಸಕಲ ಸದಸ್ಯರಿಗೂ ಸ್ನೇಹಿತರಿಗೂ, ಅವರ ಸಹಾಯ ಸಹಕಾರಗಳಿಗಾಗಿ ನಮ್ಮ ಹೃತ್ಪೂರ್ವಕ ಧನ್ಯವಾದಗಳನ್ನು ಸಮರ್ಪಿಸುತ್ತೇವೆ.

**ಸ್ವಾಮಿ ಸುಹಿತಾನಂದ**

೧೫ ಡಿಸೆಂಬರ್ ೨೦೧೨ ಪ್ರಧಾನ ಕಾರ್ಯದರ್ಶಿಗಳು



Managing Editor : Swami Muktidananda Editor : Swami Vireshananda

Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.D-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಪ್ರವಾಸ 2014 ರೈಲು ಹಾಗೂ ಬಸ್ಸಿನಲ್ಲಿ

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ

### ಮಿನಿ ಆಂಧ್ರ : 05 ದಿನಗಳು
**Feb 17**

ಮಂತ್ರಾಲಯ, ಶ್ರೀಶೈಲ ( ಜ್ಯೋತಿರ್ಲಿಂಗ), ಮಹಾನಂದಿ, ಅಹೋಬಿಲಂ (ನವನರಸಿಂಹ)

### ದಕ್ಷಿಣ ಭಾರತ : 10 ದಿನಗಳು
**Feb 22**

ಗುರುವಾಯೂರ್, ಕಾಲಡಿ, ತಿರುವನಂತಪುರ, ಸುಚೀಂದ್ರಂ, ಕನ್ಯಾಕುಮಾರಿ, ರಾಮೇಶ್ವರಂ, ಮಧುರೈ, ತಿರುಚಿ, ಶ್ರೀರಂಗಂ, ತಂಜಾವೂರ್, ಕುಂಭಕೋಣಂ, ಚಿದಂಬರಂ, ತಿರುವಣ್ಣಾಮಲೈ, ನವಗ್ರಹ

### ಶಕ್ತಿಪೀಠಗಳು ಮತ್ತು ಸಿಮ್ಲಾ ಮನಾಲಿ ಸ್ಪೆಷಲ್ : 20 ದಿನಗಳು
**Mar 17 Apr 13**

ಚಂಡೀಘರ್, ಸಿಮ್ಲಾ, ಕುಫ್ರಿ, ಕುಲು ಮನಾಲಿ, ರೋತಾಂಗ್ ಪಾಸ್ (Optional), ವಶಿಷ್ಠ, ಬೈಜ್‌ನಾಥ್, ಚಾಮುಂಡ, ನೈನಾದೇವಿ, ಖಾಂಗ್ರಾ, ಚಿಂತಪೂರ್ಣಿ, ಜ್ವಾಲಾಮುಖಿ, ಧರ್ಮಶಾಲಾ, ವೈಷ್ಣವೀದೇವಿ, ವಾಘಾ ಬಾರ್ಡರ್ (ಇಂಡೋ-ಪಾಕ್ ಬಾರ್ಡರ್), ಅಮೃತ್‌ಸರ್, ಕುರುಕ್ಷೇತ್ರ, ಶಾಕಂಬರಿ, ಹರಿದ್ವಾರ, ನವದೆಹಲಿ

### ಕೋಲ್ಕತ್ತಾ - ಡಾರ್ಜಿಲಿಂಗ್ - ಪೂರಿ : 16 ದಿನಗಳು
**Mar 12 Apr 28**

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್

### ಕೋಲ್ಕತ್ತಾ - ಡಾರ್ಜಿಲಿಂಗ್ - ಕಾಶಿ - ನೇಪಾಳ (ಮುಕ್ತಿನಾಥ್): 16/27 ದಿನಗಳು
**Apr 13**

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್, ಕಾಶಿ, ಕಠ್ಮಂಡು, ಪೋಖ್ರಾ, ಮುಕ್ತಿನಾಥ್ (Optional), ಮನೋಕಾಮನ, ಘೋರಖ್‌ಪುರ್

### ಕಾಶಿ - ಗಯಾ - ಪ್ರಯಾಗ್ : 12 ದಿನಗಳು
**Mar 08**

ಅಲಹಾಬಾದ್, ಗಯಾ, ಬುದ್ಧಗಯಾ, ಕಾಶಿ, ಸಾರಾನಾಥ್, ಅಯೋಧ್ಯಾ

### ಕೈಲಾಸ ಪರ್ವತ ಮತ್ತು ಮಾನಸ ಸರೋವರ : 14 ದಿನಗಳು

Optional : ಪೋಖ್ರಾ, ಮುಕ್ತಿನಾಥ್, ಮನೋಕಾಮನ : 4 Days

Depr. : May 21, 25, 30 June 03, 12, 21, 30 July 07, 18, 27



# ಶ್ರೀ ಹನ್ಸಾ ಟ್ರಾವೆಲ್ಸ್
# SHRI HANSAA TRAVELS

**RECOGNISED BY DEPARTMENT OF TOURISM, GOVT. OF KARNATAKA**

No. 640, 40th Cross (Near Prabha Eye Clinic), 8th Block, Jayanagar, Bangalore - 560 070.

☎: (080) 26543891 / 26643276 Mobile : (0) 9341415612 / 9341215612

e-mail : hansaatravels@gmail.com web : www.hansaatravels.com

